ಪ್ರಕಟನೆಯ ೨೭ ನೆಯ ವರ್ಷ : ೧೯೯೨

# ಸಂಕ್ರಮಣ

೨೪೩-೨೪೪

---

ಜ. ಹೊ. ನಾರಾಯಣ ಸ್ವಾಮಿ
ಮಂದಿರ, ಮಸೀದಿ : ಒಂದು ಒಳನೋಟ

ಜಿ. ಎಚ್. ನಾಯಕ
ರಾಮಜನ್ಮಭೂಮಿ-ಬಾಬ್ರಿ ಮಸೀದಿ ವಿವಾದ ಕುರಿತು

ಡಾ. ಬಸವರಾಜ ಸಾದರ
ವೆಂಕಟಪತಿಯ ಸಂಕಟ ಪ್ರಸಂಗ

ಹರಿಹರಪ್ರಿಯ
ಸ್ವಾತಂತ್ರ್ಯ ಪೂರ್ವ ಕಥಾ ಸಾಹಿತ್ಯ : ಜನಪರ ದೃಷ್ಟಿ

ವಿಲಿಯಂ
ನಾ. ಡಿಸೋಜರ ಸಾಹಿತ್ಯ ಸೃಷ್ಟಿ

ಚಂಪಾ, ಹುರುಕಡ್ಲಿ ಶಿವಕುಮಾರ
ಇವರ ಕವನಗಳು

ಸಂಕ್ರಮಣ ಸಾಹಿತ್ಯ ಸ್ಪರ್ಧೆ : ೧೯೯೨
ಬಹುಮಾನಿತ ಬರಹಗಳು

---

ಸಂಪುಟ ೨೭ : ಸಂಚಿಕೆ ೧೧-೧೨ ನವಂ-ಡಿಸೆಂ ೧೯೯೨

# ಸಂಕ್ರಮಣ

ನವಂ- ಡಿಸೆಂ ೧೯೯೨
ಸಂಪುಟ ೨೭ : ಸಂಚಿಕೆ ೧೧-೧೨

ಸಂಪಾದಕಿ
ನೀಲಾ ಪಾಟೀಲ
ಸಲಹಾ ಸಂಪಾದಕ
ಚಂದ್ರಶೇಖರ ಪಾಟೀಲ



**SANKRAMANA 243-244**
A Monthly in Kannada
Nov-Dec 1992 Vol. XXVII Nos. 11-12
Sankramana Prakashana Dharwad-580 001 Phone : 40509
Printed at Chandana Mudrana, Dharwad-8
Annual Subscription : Rs. 50/-

ಚಂದ್ರಶೇಖರ ಪಾಟೀಲ

# ನೀವು ಪಡಕೊಂಡದ್ದು* ?

ಒಂದೈದು ದುಡ್ಡೋ ಒಂಚೂರು ಬ್ರೆಡ್ಡೋ
ಕರವೆತ್ತಿ ಕೊಟ್ಟವರಿಗೆ ಶಿರಬಾಗಿದವ ಅವನು.
ಜೈ ರಾಮ ಅಂದವನು. ಯಾ ಅಲ್ಲಾ ಅಂದವನು.
ಕೊಡದಿದ್ದರೂ ಕೂಡ ಕೊರಗದವನು.

ಇರಲಿಲ್ಲ ಅವನಿಗೆ ಯಾವದೇ ತಕರಾರು.
ನಿಮ್ಮ ಮಂದಿರದ ಕೂಡ. ನಿಮ್ಮ ಮಸೀದೆಯ ಕೂಡ.
ನಿಮ್ಮ ಕೂಡ. ಬಹುಶಃ ತನ್ನೊಡನೆ ಕೂಡ.

ನಿನ್ನೆಯ ನೆನಪಿಲ್ಲದೆ, ನಾಳೆಯ ಕನಸಿಲ್ಲದೆ
ಹೊಟ್ಟೆಗೆ ಕುಕ್ಕರುಗಾಲು ಕೊಟ್ಟು, ಮಲಗಿ, ಎದ್ದು
ಮತ್ತೆ ಮಂದಿರಕೋ ಮಸೀದೆಗೋ ತೆವಳುವವನು.
ತುತ್ತು ಕೂಳಿಗಾಗಿ. ಈ ಬಿಕನೇಸಿ ಬಾಳಿಗಾಗಿ.

ರಕ್ತ ರುಚಿ ಕಂಡ ನಿಮ್ಮ ಚೂರಿ ಅವನ ಒಳಹೊಕ್ಕಾಗ
ಚೆಲ್ಲೆಂದು ಚೆಲ್ಲುವಷ್ಟು ಕೂಡ ರಕ್ತ ಇರಲಿಲ್ಲ.
ಎದೆ ಎದೆ ಬಡಕೊಂಡು ಕಣ್ಣೀರು ಹಾಕುವರಿಲ್ಲ.
ಪರಿಹಾರ ಧನಕ್ಕಾಗಿ ಅರ್ಜಿ ಹಾಕುವರಿಲ್ಲ.

ಹೇ ರಾಮ ಅಂದನೋ ಹಾ ರಹೀಮ ಅಂದನೋ...
ಅಥವ ಹಾಗೇ ಮೌನದಲ್ಲಿ ಲಯವಾದನೋ...
ಅವನೊಬ್ಬ ಭಿಕ್ಷುಕ. ಕೇವಲ ಭಿಕ್ಷುಕ ಮಾತ್ರ.
ಹೇಳಲು ಹೆಸರಿಲ್ಲದ ಮಹಾನ್ ಭಾರತದ ಪುತ್ರ.

ಆಡ್ವಾನಿ-ಜೋಶಿ- ಸಿಂಘಾಲಗಳೇ
ಉಮಾ ಭಾರತಿ-ಸಾಧ್ವಿ ರಿತ್ವಂಬರಿಗಳೇ
ಪೇಜಾವರಗಳೇ ಮೂರು ಸಾವಿರಗಳೇ
ಆ ಪುರುಷೋತ್ತಮನ ನಾಮ ಜಪ ನಿರತರೇ
ರಾಮನ ಕೆರ ಹೊತ್ತ ಪಥಸಂಚಲನ ಭರತರೇ

ನಿಮ್ಮ ಕರಸೇವೆ ಪಡಕೊಂಡ ಆತ ಕೇಳುತ್ತಾನೆ :
'ನೀವು' ಪಡಕೊಂಡಿದ್ದು ಏನು ಮಹಾಶಯರೇ ?

* ಹುಬ್ಬಳ್ಳಿಯಲ್ಲಿ ಭಿಕ್ಷುಕನೊಬ್ಬ ಚೂರಿ ಇರಿತದಿಂದ ಸತ್ತ.

ಹುರುಕಡ್ಲಿ ಶಿವಕುಮಾರ

# ಅಧ್ವಾನ್‌ಬಾಬು ಮುಹ್ಮದ್‌ಸಾಬು ಮತ್ತು ನಾನು

ಅಲ್ಲಾ ನಮ್ಮ ದೇವರಿಗೆ ಚಳಿಯಾಗ್ತದೆ
ಅಂತ ನಾನೇ ಮಸೀದಿ ಕಟ್ಟಿಸಿದ್ದೆ
ಎಂದು ಅಳುತ್ತಿದ್ದ ಮಹಮ್ಮದ್‌ಸಾಬು.

ರಾಮ ರಾಮಾ ನಮ್ಮ ದೇವರಿಗೆ ಸೆಕೆಯಾಗ್ತದೆ.
ಅಂತ ನಾನೇ ಕಿಂಡಿ ಕೊರೆದೆ
ಎಂದು ನಗುತ್ತಿದ್ದ ಅಧ್ವಾನ್‌ಬಾಬು.

ಕಿಂಡಿ ಕೊರೆವಾಗ ಮಸೀದಿ ಕುಸಿದು
ದೇಶವೆಲ್ಲಾ ರಾಮಾರಕ್ತವಾಯ್ತು.

ದೇವರಿಗೇ ಸೆಕೆ! ಚಳಿ! ಉಬ್ಬಸ!
ಛೇ ಪುಂಡಾಟ ಮಾಡ್ತೀರಾ ಮುಠ್ಠಾಳರ ?
ಅಂತ ನಾನು ಉಗಿದೆ.

ಅವರು ನಾಸ್ತಿಕ ! ನಾಸ್ತಿಕ! ಅಂತ ಉಗ್ಗಡಿಸುವ
ಭರದಲ್ಲಿ ಢಿಕ್ಕಿ ಹೊಡೆದು
ಹಣೆ ಹೊಡೆದುಕೊಂಡು ಏದುಸಿರು ಬಿಡತೊಡಗಿದರು.

ಮತ್ತೆ ನಾನೇ ಗಾಳಿ ಬೀಸಿ ನೀರು ಕುಡಿಸಿ
'ಈಗ ಬಾಯಾರಿಕೆ, ಸೆಕೆ, ನಿಮಗೋ ?
ನಿಮ್ಮ ದೇವರಿಗೋ ?' ಎಂದೆ

ಉತ್ತರಕ್ಕಾಗಿ ಇಬ್ಬರೂ ಪೇಚಾಡಿ ಪೇಚಾಡಿ
ನಾಸ್ತಿಕ! ನಾಸ್ತಿಕ! ಅಂತ ಬಡಬಡಿಸಿದರು.

# ಮಂದಿರ, ಮಸೀದಿ: ಒಂದು ಒಳನೋಟ

ಜ.ಹೊ. ನಾರಾಯಣಸ್ವಾಮಿ

ಮಂದಿರ ಮಸೀದಿ ವಿವಾದ ಮೇಲ್ನೋಟಕ್ಕೆ ಎರಡು ಧರ್ಮಗಳ ಸಂಘರ್ಷದಂತೆ ಕಂಡರೂ ವಾಸ್ತವವಾಗಿ ಅಲ್ಲಿ ಯಾವ ಧರ್ಮವೂ ಇಲ್ಲ. ಇರುವುದು ಒಂದೇ–ಅದು ಸ್ವಾರ್ಥ. ಈ ಸ್ವಾರ್ಥ ಪ್ರಕೃತಿ ಎಲ್ಲ ಪ್ರಾಣಿವರ್ಗಗಳಲ್ಲಿ ಇರುವ ಒಂದು ಗುಣ. ಆದರಿಂದ ಮನುಷ್ಯನೂ ಹೊರತಾಗಿಲ್ಲ. ಏಕೆಂದರೆ ಮನುಷ್ಯನೂ ಒಂದು ಪ್ರಾಣಿ. ಎಲ್ಲಿ ಅಕ್ಷರ-ಅರಿವು ಇರದ ಬಹುಸಂಖ್ಯಾತರಿರುತ್ತಾರೋ ಅಲ್ಲಿ ಧರ್ಮವನ್ನು ಒಂದು ಅಫೀಮನ್ನಾಗಿ ಬಳಸಿ ಈ ಸ್ವಾರ್ಥ ಸಾಧಿಸಿಕೊಳ್ಳುವುದು ಸುಲಭ. ಎಲ್ಲ ಜನಾಂಗದವರೂ ಈ ಧರ್ಮವನ್ನು ಮುಂದುಮಾಡಿಕೊಳ್ಳಲು ಇದೇ ಕಾರಣ. ಸ್ವಾರ್ಥ ಸಾಧಿಸಿಕೊಳ್ಳಲು ಇದು ಸುಲಭೋಪಾಯದ ಮಾರ್ಗ.

ಉಪನಿಷತ್ತುಗಳ ಅದ್ವೈತವಾಗಲೀ. ಬುದ್ಧನ ಮುಕ್ತತೆಯಾಗಲೀ, ಏಸುವಿನ ತ್ಯಾಗ ಕರುಣೆಗಳಾಗಲೀ, ಪೈಗಂಬರನ ಸಮಾನತೆಯಾಗಲೀ, ಸಾಕ್ರಟೀಸನ ಅಂತಸಾಕ್ಷಿಯಾಗಲೀ, ರಾಮಕೃಷ್ಣ ಪರಮಹಂಸರ ಸಮನ್ವಯವಾಗಲೀ, ವಿವೇಕಾನಂದರ ವೇದಾಂತವಾಗಲೀ. ಮಹಾತ್ಮಾಗಾಂಧಿಯ ಅಹಿಂಸಾ ತತ್ವವಾಗಲೀ, ಅರವಿಂದರ ಅಧ್ಯಾತ್ಮವಾಗಲೀ, ಡಾ. ಲೋಹಿಯಾ ಅವರ ಸಮಾಜವಾದವಾಗಲೀ, ಡಾ. ಅಂಬೇಡ್ಕರ್ ಅವರ ಸಾಮಾಜಿಕ ಕಳಕಳಿಯಾಗಲೀ, ಸುಭಾಸ್‌ಚಂದ್ರಬೋಸರ ದೇಶಪ್ರೇಮವಾಗಲೀ ಈ ಯಾವುವೂ ಯಾರಿಗೂ ಬೇಡ. ಅವರ ಹೆಸರಿನಲ್ಲಿ ಆ ಆದರ್ಶಗಳ ತುತ್ತೂರಿ ಊದುತ್ತಾ ಅಂತರಂಗದಲ್ಲಿ ಸ್ವಾರ್ಥ ಸಾಧಿಸಿಕೊಳ್ಳುವುದೆ ಎಲ್ಲರ ಗುರಿ. ಅದಕ್ಕೆ ಪ್ರಬಲ ಕಾರಣ ಅದೇ ಸ್ವಾರ್ಥ.

ಮಂಗನಿಂದ ಮಾನವನಾದ ಮನುಷ್ಯ ಹೊರನೋಟಕ್ಕಷ್ಟೇ ಮನುಷ್ಯನಾಗಿ ಕಾಣಿಸಿ
ಕೊಂಡಿದ್ದಾನೆ. ಅಂತರಂಗ ಮಾತ್ರ ಅನಾಗರಿಕವಾಗಿಯೆ ಉಳಿದಿದೆ. ವಿಶ್ವದ ಪ್ರಗತಿ
ಎಂದು ಕರೆವುದು ಕೂಡ ಈ ಅನಾಗರಿಕತೆಯ ಮುಂದುವರೆದ ಬೆಳವಣಿಗೆಯೇ.
ಅದರ ಅಂತರಂಗದಲ್ಲಿ ಭಯ ಮತ್ತು ಸ್ವಾರ್ಥ ಮನೆ ಮಾಡಿವೆ. ಆದ ಕಾರಣವೆ
ಭೂಮಿಯ ಮೇಲಿನ ಮಾನವರ ಶ್ರಮದ ಫಲದಲ್ಲಿ ಶೇ ೬೦ ಭಾಗ ಯುದ್ಧ
ಸಾಮಗ್ರಿಗೆ ವ್ಯಯವಾಗುತ್ತಿದೆ. ಪರಿಸರ ನಾಶ ಆಗುತ್ತಿದೆ. ಮಾನವನ ಬದುಕು
ಶುದ್ಧ ಗಾಳಿ, ನೀರು, ಸಿಗದಷ್ಟು ಅಸಹನೀಯವಾಗುತ್ತಿದೆ. ಅದ್ದರಿಂದ ಈ
ಬೆಳವಣಿಗೆ ಸಕಾರಾತ್ಮಕವಾದುದಲ್ಲ, ನಕಾರಾತ್ಮಕವಾದುದು.

ಮಂದಿರ ಮಸೀದಿಗೆ ಬರೋಣ. ಈ ಸಮಸ್ಯೆ ಇಂದು ಭಾರತದಲ್ಲಿ ಉಲ್ಬಣ
ಗೊಳ್ಳಲು ಕಾರಣವೇನು? ಧರ್ಮವೆ? ಖಂಡಿತ ಅಲ್ಲ. ಅದಕ್ಕೆ ಕಾರಣ
ಧರ್ಮಗಳ ನಡುವೆ ಇರುವ ರಿಜಿಡಿಟಿ. ಈ ರಿಜಿಡಿಟಿ ಇರುವುದು ವೈದಿಕ ಮತ್ತು
ಇಸ್ಲಾಂ ಧರ್ಮದ ನಡುವೆ. ಹಿಂದೂ ಧರ್ಮಕ್ಕೆ ಆ ರಿಜಿಡಿಟಿ ಇಲ್ಲ. ಹಿಂದೂ
ಧರ್ಮವೆಂದರೆ ವೇದಾಂತ. ಅದಕ್ಕೆ ಈ ಸೋಂಕಿಲ್ಲ. 'ಹಿಂದೂ' ಎಂದು ಕರೆದು
ಅದಕ್ಕೆ ಕಳಂಕ ಹಚ್ಚಿದ್ದಾರೆ. ಇದನ್ನು ಅತ್ಯಂತ ಎಚ್ಚರದಿಂದ ಕಂಡುಕೊಳ್ಳಬೇಕು.

ವೈದಿಕ ಧರ್ಮ ಚಾತುರ್ವರ್ಣ್ಯದ ಮೇಲೆ ನಿಂತಿದೆ. ಜಾತಿ ಅದರ ಅಂತರಂಗ.
ಮೇಲು-ಕೀಳು, ಸ್ಪೃಶ್ಯ-ಅಸ್ಪೃಶ್ಯತೆ ಅದರ ಉಚ್ಛ್ವಾಸ ನಿಶ್ವಾಸಗಳು. ಇಲ್ಲಿ
ಬ್ರಾಹ್ಮಣ ಮೇಲು, ಮಿಕ್ಕವರು ಕೀಳು. ಪಿರಮಿಡ್ ಸಂಸ್ಕೃತಿ. ತನ್ನ ಈ ಮೇಲಿನ
ಸ್ಥಾನವನ್ನು ಕಾಪಾಡಿಕೊಳ್ಳಲು, ಸ್ವಾರ್ಥ ಸಾಧಿಸಿಕೊಳ್ಳಲು ಮಂದಿರ ಕಟ್ಟ
ಬೇಕೆಂಬುದು ಅಂತರಂಗದ ಸಂಚು. ವೈದಿಕ ದೇವಸ್ಥಾನಗಳಲ್ಲಿಯೇ ಸಮಾನತೆ
ಇಲ್ಲ. ಜಾತಿಯನ್ನು ಎತ್ತಿ ತೋರಿಸುವ ಕೇಂದ್ರಗಳವು.

ಕುರಾನ್ ಪರಮ ಪೂಜ್ಯ ಎಂದು ಅದರ ತಂಟೆಗೆ ಹೋಗದೆ, ಪೈಗಂಬರ್ ಕಡೆಯ
ಪ್ರವಾದಿ ಎಂದು ಸುಧಾರಣೆಗೆ ತೆರೆದುಕೊಳ್ಳದೆ ಅದರ ಮುಷ್ಟಿಯಲ್ಲಿ ಬಂಧಿಸಿ
ಕೊಂಡು ಎಲ್ಲರನ್ನೂ ಬಂಧಿಸಲು ಹವಣಿಸುವುದು ಕೂಡ ಈ ಸ್ವಾರ್ಥಕ್ಕಾಗಿಯೇ.
'ಸಟಾನಿಕ್‌ವರ್ಸ್' ಬರೆದ ಸಲ್ಮಾನ್‌ರಶಿಯ ಕೊಲೆ ಬೆದರಿಕೆ ಕೂಡ ಧರ್ಮದ
ರಿಜಿಡಿಟಿ ಇಂದ ಹುಟ್ಟುವಂತಹುದು. ವಿಮರ್ಶೆಗೆ ತೆರೆದುಕೊಳ್ಳುವುದಲ್ಲ.
ಶಾಬಾನೋ ಬೇಗಂ ಪ್ರಕರಣ ಕೂಡ ಈ ಹಿನ್ನೆಲೆಯಲ್ಲಿ ಆಗುವಂತಹುದು.
'ಸಮಾಜ ನಾಗರಿಕ ಸಂಹಿತೆ' ಸಂವಿಧಾನದಲ್ಲಿ ಸತ್ತು ಕೂತಿರುವುದು ಈ
ಕಾರಣಕ್ಕಾಗಿಯೆ. 'ಸ್ವಾರ್ಥ' ಧರ್ಮದ ಕವಚ ತೊಟ್ಟು ತನ್ನ ಗುರಿಯನ್ನು ಸಾಧಿಸಿ
ಕೊಳ್ಳುತ್ತದೆ. ಇದು ಧರ್ಮ ಅಲ್ಲ, ಸತ್ಯ ಅಲ್ಲ ಎನ್ನುವುದು ವ್ಯಕ್ತಿಯ ಹೃದಯಕ್ಕೆ
ಗೊತ್ತು. ಆದರೆ ವ್ಯಕ್ತಿಗತ ಸತ್ಯ ಧರ್ಮವಾದಾಗ ಸಾಯುತ್ತದೆ.

ಇಂದು ರಾಷ್ಟ್ರದಲ್ಲಿ ಸಾವಿರಾರು ಸಾವುಗಳಾಗಿದ್ದರೆ, ಕೋಟ್ಯಾಂತರ ನೋವುಗಳಾಗಿದ್ದರೆ, ಆಸ್ತಿ ಪಾಸ್ತಿಗಳು ನಷ್ಟವಾಗಿದ್ದರೆ, ಪಾರ್ಲಿಮೆಂಟಾಗಲೀ, ರಾಜ್ಯಗಳ ವಿಧಾನ ಸಭೆಗಳಾಲೀ, ದೇಶದ ಶಾಲಾ ಕಾಲೇಜುಗಳಾಗಲೀ, ಕಛೇರಿಗಳಾಗಲಿ ನಡೆಯದೆ ಅಸ್ತವ್ಯಸ್ತಗೊಂಡಿದ್ದರೆ ಅದಕ್ಕೆ ಕಾರಣ ಮಂದಿರ ಮಸೀದಿಗಳಲ್ಲ, ಆ ಧರ್ಮಗಳಲ್ಲಿರುವ ರಿಜಿಡಿಟಿ, ಸ್ವಾರ್ಥ. "ಅದ್ಭುತ ಶಕ್ತಿಯುಳ್ಳ ಧರ್ಮಗಳ ಪ್ರಪಂಚಕ್ಕೆ ಒಳ್ಳೆಯದನ್ನು ಮಾಡುವುದಕ್ಕಿಂತ ಕೆಟ್ಟದ್ದನ್ನು ಮಾಡಿವೆ. ಇದಕ್ಕೆ ಕಾರಣ ಆ ಧರ್ಮಗಳ ಸಂಕುಚಿತ ಭಾವನೆ" (೩/೧೪) ವಿವೇಕಾನಂದರ ಈ ಮಾತು ಎಷ್ಟು ಸತ್ಯ!

ನನಗೆ ಮುಂಜಿ ಮಾಡಿಸುವ ಧರ್ಮಗಳ ಬಗ್ಗೆ ಅನುಮಾನ ಹೆಚ್ಚಾಗಿದೆ. ಆ ಕ್ರಿಯೆ ಅವರನ್ನು ಅವರಿಗರಿವಿಲ್ಲದಂತೆಯೇ ಎರಡು ಪರಿಣಾಮಗಳಿಗೆ ಗುರಿಮಾಡುತ್ತದೆ. ಒಂದು ತಾನು ಉತ್ತಮ ಎಂಬ ಭ್ರಮೆಗೆ; ಮತ್ತೊಂದು ಪ್ರತ್ಯೇಕತಾ ಭಾವನೆಗೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಮುಸಲ್ಮಾನರಿಗೆ ಮುಂಜಿ ಎಂಬ ಕ್ರಿಯೆ ಇದೆ. ಅದು ಅಲ್ಲಿಯ ಪುರುಷರಿಗೆ ಮಾತ್ರ ಸೀಮಿತವಾಗಿದ್ದು ಸ್ತ್ರೀಯರನ್ನು ಅದರಿಂದ ಹೊರತು ಪಡಿಸಿ ಶೋಷಣೆಯ ಕೇಂದ್ರವಾಗಿಸಿಕೊಂಡಿರುವುದು ಈ ಕ್ರಿಯೆಯ ಕರಾಳಮುಖ. ದ್ರಾವಿಡರ ಅರ್ಧನಾರೀಶ್ವರ ವಿಶ್ವದ ಆದರ್ಶ. ಆದರೆ ಆ ಆದರ್ಶವೂ ಈ ಮಣ್ಣಿನಲ್ಲಿ ಕಣ್ಣು ತೆರೆಯಲಿಲ್ಲ. ಈ ಉಪನಯನದಿಂದ ಒಳ ವ್ಯಕ್ತಿತ್ವ ಹೊರಹೊಮ್ಮಿ ವಿಶ್ವ ವ್ಯಾಪಕವಾಗುವ ಬದಲು ಮಣ್ಣಿನ ಕಣ್ಣನ್ನು ಕಳೆದುಕೊಂಡು ಕಣ್ಣು ಉಪ ಆಗಿ ಸಂಕುಚಿತ ದೃಷ್ಟಿಗೆ ಈಡು ಮಾಡಿದೆ. ಹೀಗಾಗಿ ಇವರ ಧರ್ಮದಲ್ಲಿ ಸಮಾನತೆಯ ತತ್ವ ಸತ್ತು ಇವರಿಗಿಂತ ಹೆಚ್ಚಾಗಿ ಗೋವು ಮತ್ತು ಹಂದಿ ಪ್ರಾಮುಖ್ಯತೆ ಪಡೆದು ಇಬ್ಬರ ನಡುವೆ ಘೋರ ಕಲಹಕ್ಕೆ ಕಾರಣವಾಗಿ ಮಾನವೀಯ ಮೌಲ್ಯ ಮಣ್ಣಾಗಿದೆ.

ಕಠೋಪನಿಷತ್ತಿನಲ್ಲಿ ಒಂದು ಶ್ಲೋಕ ಇದೆ. "ಅಲ್ಲಿ (ಅಂತಸ್ಸಾಕ್ಷಿ) ಸೂರ್ಯನಾಗಲೀ, ಚಂದ್ರನಾಗಲೀ, ನಕ್ಷತ್ರಗಳಾಗಲೀ ಪ್ರಕಾಶಿಸುವುದಿಲ್ಲ. ಈ (ಕಣ್ಣಿಗೆ ಕಾಣುವ) ಅಗ್ನಿಯು ಪ್ರಕಾಶಿಸುವುದೆಲ್ಲಿ? ಪ್ರಕಾಶಿಸುತ್ತಿರುವ ಅವನನ್ನೇ (ಅಂತಸಾಕ್ಷಿಯನ್ನೇ) ಅನುಸರಿಸಿ ಎಲ್ಲವೂ ಪ್ರಕಾಶಿಸುತ್ತಿರುವುವು. ಅವನ (ಅಂತಸ್ಸಾಕ್ಷಿಯ) ಪ್ರಕಾಶದಿಂದಲೇ ಇದೆಲ್ಲವೂ ಪ್ರಕಾಶಿಸುತ್ತಿರುವುದು" ಎಂದು. ಅಂತಸ್ಸಾಕ್ಷಿಯ ಮತ್ತು ಸೃಷ್ಟಿಯ ಸಂಬಂಧದಿಂದ ಆವಿರ್ಭವಿಸಬೇಕಾದ ಸುಕೃತಿ, ಆತ್ಮವಂಚನೆಯಿಂದ ವಿಕೃತಿ ಹೊಂದಿರುವುದೇ ಈ ಮಂದಿರದ ವಿಕಲ್ಪಕ್ಕೆ ಕಾರಣವಾಗಿದೆ; ವೇದಾಂತ ಉಸಿರುಗಟ್ಟಿದೆ.

ಮಹಮದ್ ಪೈಗಂಬರ್ ಜೀವಿತದ ಕೊನೆಯ ದಿನಗಳಲ್ಲಿ ಹೇಳಿದ ಒಂದು ಮಾತು ಮನನೀಯವಾಗಿದೆ. "ಯಾವ ಅರಬನೂ ಅರಬನಲ್ಲದವನಿಗಿಂತ ಮೇಲಲ್ಲ; ಯಾವ ಕರಿಯನೂ ಬಿಳಿಯನಿಗಿಂತ ಮೇಲಲ್ಲ; ಯಾವ ಬಿಳಿಯನೂ ಕರಿಯನಿಗಿಂತ

ಮೇಲಲ್ಲ—ಅವರ ಉತ್ತಮ ನಡವಳಿಕೆಯುನ್ನವಲಿದು" ಮನುಷ್ಯನ ಗುಣ ಮತ್ತು ಕೃತ್ಯದಿಂದ ಅವನ ಶ್ರೇಷ್ಠತೆ ಗುರುತಿಸಲ್ಪಡುತ್ತದೆ ಎನ್ನುವ ವಾಸ್ತವ ಸತ್ಯದ ನುಡಿಗಳನ್ನು ಅವರಿವರೆನ್ನದೆ ಎಲ್ಲರೂ ಮಾನ್ಯ ಮಾಡಬೇಕು. ಈ ಸಮಾನತೆಯೇ ಇಂದು ಜಾತ್ಯಾತೀತ ರಾಷ್ಟ್ರ ಭಾರತದ ಆದರ್ಶ ಆಗಬೇಕು. ವಿಶ್ವಕ್ಕೆ ಮಾದರಿಯಾಗಿ ನಿಲ್ಲಬೇಕು.

ಎರಡು ಧರ್ಮಗಳಲ್ಲಿರುವ ಅದ್ಭುತ ಸತ್ಯವನ್ನು ಮನಗಂಡ ವಿವೇಕಾನಂದರು "ನಮ್ಮ ಮಾತೃ ಭೂಮಿಯಲ್ಲಿ ಹಿಂದೂ ಮತ್ತು ಮುಸಲ್ಮಾನ ಧರ್ಮಗಳೆರಡೂ ಮಿಲನವಾಗಬೇಕು. ವೇದಾಂತದ ಮಿದುಳು, ಇಸ್ಲಾಮಿನ ದೇಹ ಇದೊಂದೇ ನಮ್ಮ ಪುರೋಗಮನಕ್ಕೆ ಹಾದಿ" (೭/೨೪೪) ಎಂದು ಹೇಳಿದರು. ಎಲ್ಲ ಧರ್ಮಗಳ ಆಚೆ ನೋಡುವ ವೇದಾಂತ ದೃಷ್ಟಿ ಹಾಗೂ ಮೇಲುಕೀಳು, ಸ್ಪೃಶ್ಯ-ಅಸ್ಪೃಶ್ಯತೆಯ ಸೋಂಕಿರದ ಇಸ್ಲಾಂ ಧರ್ಮದ ಸಮಾನತೆ ಇವುಗಳಿಂದ ಭಾರತದ ಶ್ರೇಯಸ್ಸು ಸಾಧ್ಯ ಎನ್ನುವ ವಿವೇಕಾನಂದರ ವಾಸ್ತವ ದೃಷ್ಟಿ ಇಂದಿನ ಗುರಿಯಾಗಬೇಕು. ಮಂದಿರ ಮಸೀದಿಗಳಲ್ಲ. ಈ ದೇಶದ ಧರ್ಮಗಳ ಗೊಂದಲಕ್ಕೆ ಇರುವ ಏಕೈಕ ಪರಿಹಾರವೆಂದರೆ "ಹಿಂದೆ ಇದ್ದ ಧರ್ಮಗಳನ್ನೆಲ್ಲಾ ನಾನು ಸ್ವೀಕರಿಸುತ್ತೇನೆ. ನಾನು ಮಹಮದೀಯರ ಮಸೀದಿಗೆ ಹೋಗುತ್ತೇನೆ. ಕ್ರೈಸ್ತರ ಚರ್ಚಿನಲ್ಲಿ ಶಿಲುಬೆಯ ಎದುರಿಗೆ ಬಾಗುತ್ತೇನೆ. ಬೌದ್ಧರ ವಿಹಾರದಲ್ಲಿ ಬುದ್ಧನಲ್ಲಿ ಮತ್ತು ಅವನ ಧರ್ಮದಲ್ಲಿ ಶರಣಾಗತನಾಗುತ್ತೇನೆ ಹಿಂದುಗಳೊಂದಿಗೆ ಕಾಡಿಗೆ ಹೋಗಿ ಎಲ್ಲರಲ್ಲಿ ಬೆಳಗುತ್ತಿರುವ ಆ ಪರಂಜ್ಯೋತಿಯ ದರ್ಶನಕ್ಕಾಗಿ ಧ್ಯಾನ ಮಾಡುವವರೊಂದಿಗೆ ನಾನೂ ಧ್ಯಾನಮಗ್ನನಾಗುತ್ತೇನೆ" (೩/೨೫೦) ವಿವೇಕಾನಂದರ ಈ ಇಂಥ ಮುಕ್ತ ಮನಸ್ಸನ್ನು ಒಳಗೊಳ್ಳುವುದು.

ಪ್ರಪಂಚದಲ್ಲಿಯೇ ಅತಿ ಎತ್ತರವಾದ ಪರ್ವತ ಹಿಮಾಲಯ. ಅದು ಭಾರತದಲ್ಲಿದೆ. ಜಾತ್ಯಾತೀತ ಭಾರತದ ಆದರ್ಶ ಕೂಡ ಆ ಎತ್ತರದ್ದೆ. ಆದರೆ ಅಯೋಧ್ಯೆಯಲ್ಲಿ ನಡೆದದ್ದು ಹಿಮಾಲಯದ ಎತ್ತರವೂ ಉತ್ತರಿಸಲಾಗದ ಹೀನಾಯ ಕೃತ್ಯ. ಭಾರತದ ಇತಿಹಾಸದಲ್ಲಿ ಎಂದೆಂದಿಗೂ ಉಳಿಯುವ ಕಪ್ಪುಛಾಯೆ. ನಂತರ ದೇಶದಾದ್ಯಂತ ನಡೆದ ಘಟನೆಗಳು ಅಂತರಂಗದಲ್ಲಿ ಅವಿತಿರುವ ಅನಾಗರಿಕತೆಯನ್ನು ಬಹಿರಂಗಗೊಳಿಸಿವೆ. ಈ ಆವೇಶದ ಅನಾಗರಿಕ ವರ್ತನೆಗೆ ಕಾರಣ ಇಲ್ಲದಿಲ್ಲ. ಅದೇ ಧರ್ಮದ ಬಗ್ಗೆ ಮೂಲಭೂತ ವಾದಿಗಳಲ್ಲಿ ಇರುವ ರಿಜಿಡಿಟಿ.

ಕೊಲ್ಲುವುದು ಧರ್ಮ ಅಲ್ಲ. ಕೊಲ್ಲುವ ಮನಸ್ಸನ್ನು ಗೆಲ್ಲುವುದು ಧರ್ಮ. ಆ ಶಕ್ತಿ ಅಂಗುಲಿಮಾಲನನ್ನು ಗೆದ್ದು ಅವನನ್ನು ಮಾನವನನ್ನಾಗಿಸಿದ ಬುದ್ಧನಲ್ಲಿತ್ತು. ಶಿಲುಬೆಗೆ ಹಾಕಿ ಮೊಳೆ ಹೊಡೆಯುವಾಗ ' ಓ ದೇವರೆ ಇವರನ್ನು ಕ್ಷಮಿಸು. ಅವರು

ಏನು ಮಾಡುತ್ತಿದ್ದಾರೆ ಎಂಬುದು ಅವರಿಗೇ ತಿಳಿಯದು' ಎಂದ ಏಸುವಿನ ಕರುಣೆ ಮೃಗೀಯತೆಯನ್ನು ಕೊಂದು ಮಾನವ ಹೃದಯಗಳನ್ನು ಹುಟ್ಟಿಹಾಕಿತು. 'ಸಾಕ್ರಟೀಸ್' ಕೊಟ್ಟ ವಿಷವನ್ನು ನಗುನಗುತ್ತಲೇ ಕುಡಿದು ಅಮರ ತತ್ವವನ್ನು ಸಾರಿ ಎಲ್ಲರ ಹೃದಯವನ್ನು ಸೂರೆಗೊಂಡ. ನಮ್ಮಗಳ ಮುಂದಿರುವ ಆದರ್ಶಗಳಿವು. ಕೊಲ್ಲುವುದಲ್ಲ.

ಭಾರತಕ್ಕೆ ಸ್ವಾತಂತ್ರ್ಯ ಬಂದ ಸಂದರ್ಭದಲ್ಲಿ ಒಬ್ಬ ಸಮರ್ಥ ನಾಯಕ ನಿದ್ದಿದ್ದರೆ ಈ ದೇಶಕ್ಕೆ ಅವನು ಏನು ಮಾಡಬಹುದಿತ್ತು ಎಂದು ನಾನು ಅನೇಕ ಬಾರಿ ಚಿಂತಿಸಿದ್ದೇನೆ. ಬಹುಶಃ ಆತ :–

ಕಾಶ್ಮೀರವನ್ನು ಸಮಸ್ಯೆಯನ್ನಾಗಿ ಉಳಿಸಿಕೊಂಡು ಬರುತ್ತಿರಲಿಲ್ಲ. ಜನಸಂಖ್ಯಾ ನಿಯಂತ್ರಣದ ಬಗ್ಗೆ ಆದ್ಯತೆ ಕೊಟ್ಟು ಧರ್ಮ ಅಡ್ಡಗಾಲು ಹಾಕದ ಹಾಗೆ ಜಾರಿಗೊಳಿಸುತ್ತಿದ್ದ. ಸಮಾನ ನಾಗರಿಕ ಸಂಹಿತೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುತ್ತಿದ್ದ. ಅಕ್ಷರ ಹಾಗೂ ಅರಿವಿಗೆ ಮೂಲವಾದ ಏಕರೂಪದ ಶಿಕ್ಷಣ ರೂಪಿಸಿ ಅನುಷ್ಠಾನಕ್ಕೆ ತರುತ್ತಿದ್ದ. ಯುವಶಕ್ತಿಯನ್ನು ರಾಷ್ಟ್ರದ ಪ್ರಮುಖ ಶಕ್ತಿಯಾಗಿಸುತ್ತಿದ್ದ. ಧರ್ಮದ ನೆಪದಲ್ಲಿ ಸ್ತ್ರೀಯರನ್ನು ಶೋಷಣೆ ಮಾಡುವುದನ್ನ ಹೆಚ್ಚು ಹೆಂಡಿರನ್ನು ಕಟ್ಟಿಕೊಳ್ಳುವುದನ್ನ ನಿಷೇಧಿಸಿ ಸ್ತ್ರೀಯರನ್ನು ಗೌರವಿಸಿ ಕಾಪಾಡುತ್ತಿದ್ದ. ಕನಿಷ್ಠ ಎಲ್ಲರಿಗೆ ಮೂಲಭೂತ ಜೀವನಾವಶ್ಯಕತೆ ಸಿಗುವವರೆಗೆ ವೈಭವದ ಬಂಗಲೆಗಳನ್ನ, ಪಂಚತಾರಾ ಹೋಟೆಲ್‌ಗಳನ್ನ, ಅನಗತ್ಯ ದುಂದನ್ನು ನಿಯಂತ್ರಿಸಿ ಅವಶ್ಯಕತೆಗಷ್ಟೇ ಅವಕಾಶ ಮಾಡುತ್ತಿದ್ದ. ಜಾತಿ, ವರ್ಣ ವ್ಯವಸ್ಥೆಯನ್ನು ತೊಡೆಯಲು ಮುಂದಾಗುತ್ತಿದ್ದ. ಭೂಸುಧಾರಣಾ ಕಾಯ್ದೆಯನ್ನು ಜಾರಿಗೊಳಿಸಿ ಉಳುವವನಿಗೇ ಭೂಮಿ ಎಂಬುದನ್ನು ವೈಜ್ಞಾನಿಕವಾಗಿ ಅಳವಡಿಸುತ್ತಿದ್ದ. ರಾಷ್ಟ್ರದ ಸಂಪತ್ತನ್ನು ರಕ್ಷಿಸಿ ದೇಶ ಆರ್ಥಿಕ ಸ್ಥಿತಿ ಉತ್ತಮಗೊಳ್ಳುವಂತೆ ಮಾಡುತ್ತಿದ್ದ; ಭಿಕ್ಷಾಪಾತ್ರೆಯನ್ನಿಡಿದು ಪರರಾಷ್ಟ್ರಗಳ ಮನೆಯ ಮುಂದೆ 'ಭಿಕ್ಷಾಂದೇಹಿ' ಎಂದು ಸೆರಗೊಡ್ಡಿ ನಿಲ್ಲುತ್ತಿರಲಿಲ್ಲ. ಮಂತ್ರಿಯ ಘಟಸರ್ಪಗಳು ವಾಸಿಸುವ ಮಠಮಾನ್ಯಗಳನ್ನ ವಿದ್ಯಾಕೇಂದ್ರಗಳಾಗಿ ಪರಿವರ್ತಿಸುತ್ತಿದ್ದ. ಹಾದಿ ಬೀದಿಗಳಲ್ಲಿ, ಬಸ್‌ಸ್ಟ್ಯಾಂಡಿನಂತ ಸಾರ್ವಜನಿಕ ಸ್ಥಳಗಳಲ್ಲಿ ಮಂದಿರಗಳನ್ನು ಕಟ್ಟದಂತೆ ಕಟ್ಟುನಿಟ್ಟು ಮಾಡುತ್ತಿದ್ದ. ಶುಕ್ರವಾರದ ಪೂಜೆ ನಮಾಜುಗಳು ಕಛೇರಿಯ ಒಳಕ್ಕೆ ಸುಳಿಯದಂತೆ ಕಟ್ಟೆಚ್ಚರ ಕೊಡುತ್ತಿದ್ದ; ಕಛೇರಿಯ ಕೆಲಸವೆ ಪೂಜೆ ಎಂಬ ಅರಿವು ಮೂಡಿಸುತ್ತಿದ್ದ. ೧೯೪೭ರ ಸ್ಥಿತಿಯನ್ನ ಎಲ್ಲ ಒಪ್ಪಿ ಹಳೆಯ ವೈಷಮ್ಯಗಳನ್ನು ಹುಟ್ಟಹಾಕದಂತೆ ರಾಷ್ಟ್ರೀಯ ಸ್ಮಾರಕಗಳನ್ನಾಗಿಸಿ ಪರಸ್ಪರ ಪ್ರೀತಿ ಸೌಹಾರ್ದತೆ ಬೆಳೆಯುವಂತೆ ಆದರ್ಶ ಕೇಂದ್ರಗಳನ್ನಾಗಿಸುತ್ತಿದ್ದ. ಸರ್ವ ಧರ್ಮ ಸಮನ್ವಯದ ಮಾನವೀಯ ಭಾರತವನ್ನು ಹಿಮಾಲಯದ ಎತ್ತರಕ್ಕೆ ಎತ್ತಿ ಜಗತ್ತಿಗೆ ಉತ್ತರಿಸುತ್ತಿದ್ದ.

ಬಹುಶಃ ಕುಡಿಯಲು ನೀರಿರದ, ಪ್ರಾಥಮಿಕ ಅವಶ್ಯಕತೆಗಳಿಂದ ವಂಚಿತವಾಗಿರುವ ಬಹುಸಂಖ್ಯಾತ ಭಾರತೀಯರಿಗೆ ಇಂದು ಬೇಕಾಗಿರುವುದು ಮಂದಿರವೂ ಅಲ್ಲ ಮಸೀದಿಯೂ ಅಲ್ಲ. ಪ್ರಾಥಮಿಕ ಅವಶ್ಯಕತೆ ಹಾಗೂ ಕನಿಷ್ಠ ಮನುಷ್ಯರಂತೆ ನೆಮ್ಮದಿಯಿಂದ ಬದುಕುವುದು.

ವಿಶ್ವಸಂಸ್ಥೆಯ ಆಶಯದಂತೆ ಅಮೆರಿಕ ಸೊಮಾಲಿಯಾಕ್ಕೆ ಸೈನಿಕರನ್ನು ಕಳುಹಿಸಿ ಹಸಿದ ಒಡಲಿಗೆ ಅನ್ನ ಕೊಟ್ಟು ಸಾವಿನ ದವಡೆಯಲ್ಲಿರುವವರನ್ನು ಸಂರಕ್ಷಿಸಿ ಮಾನವೀಯತೆಯನ್ನು ಪ್ರದರ್ಶಿಸುತ್ತಿರುವ ಈ ಜಾಗತಿಕ ಸಂದರ್ಭದಲ್ಲಿ ಆಧ್ಯಾತ್ಮಿಕತೆ ಹೇಳುವ ಭಾರತದಲ್ಲಿ ಧರ್ಮದ ಹೆಸರಿನಲ್ಲಿ ರುಂಡಗಳನ್ನು ಚೆಂಡಾಡುವ ಸ್ಥಿತಿಗೆ ತಂದ ಧರ್ಮಗಳ ಬಗ್ಗೆ, ಧರ್ಮೀಯರ ಬಗ್ಗೆ ಧಿಕ್ಕಾರವಿರಲಿ.

ಮಂದಿರ ಮಸೀದಿ ವಿವಾದ ಹಚ್ಚಿರುವ ಈ ಕಿಚ್ಚು ಸಮಸ್ಯೆಗಳನ್ನು ಪರಸ್ಪರ ಚರ್ಚಿಸಿ ಮನುಷ್ಯರಾಗುವ ಕೆಚ್ಚನ್ನು ಎಲ್ಲರ ಹೃದಯದಲ್ಲಿ ಕೆರಳಿಸಬಲ್ಲುದೆ? ಅದಾದಾಗ ಮಾತ್ರ ಕಿಚ್ಚು ಮೆಚ್ಚಾಗುತ್ತದೆ. ಇಲ್ಲದಿದ್ದರೆ ಅದು ಹುಚ್ಚಾಗಿ ಸಮಾಜ ನುಚ್ಚು ನೂರಾಗಲು ಕಾರಣವಾಗುತ್ತದೆ. ಹಾಹಾಕಾರ ಹಾಸುಹೊಕ್ಕಾಗುತ್ತದೆ. ಭಾರತ ಬೃಹತ್ ರಾಷ್ಟ್ರಗಳಿಗೆ ಆಹಾರವಾಗುತ್ತದೆ. ಅಂತಹ ಸ್ಥಿತಿ ಈ ಭವ್ಯ ಭಾರತಕ್ಕೆ ಎಂದೆಂದಿಗೂ ಪ್ರಾಪ್ತವಾಗದಿರಲಿ. ●

# ರಾಮಜನ್ಮಭೂಮಿ-ಬಾಬರಿ ಮಸೀದಿ ವಿವಾದ ಕುರಿತು*

ಜಿ. ಎಚ್. ನಾಯಕ

ಇಂದು ಈ ದೇಶ ಎಲ್ಲದಕ್ಕಿಂತ ಮೊದಲು ಸಹಿಸುವ ಸಂಸ್ಕೃತಿಯನ್ನು ಅತ್ಯಂತ ಅಗತ್ಯವಾಗಿ ಬೆಳೆಸಿಕೊಳ್ಳಬೇಕಾಗಿದೆ. ಹಿಂದಿನಿಂದಲೂ ಪರಮತ ಸಹಿಷ್ಣುತೆಯನ್ನು ಒಂದು ಮೌಲ್ಯವೆಂದು ಒಪ್ಪಿ ಪ್ರತಿಪಾದಿಸುತ್ತಾ ಬಂದಿರುವ ಪರಂಪರೆ ಈ ದೇಶಕ್ಕೆ ಇದೆ. ಚರಿತ್ರೆಯು ಒಳ್ಳೆಯ ರಾಜರನ್ನು ಗುರುತಿಸಿ ಹೇಳುವಾಗ ಈ ಸಹಿಷ್ಣುತೆಯ ಮಾತನ್ನೂ ಹೇಳುತ್ತ ಬಂದಿದ್ದೇವೆ. ಆದರೂ ಈ ದೇಶ ಸಹಿಷ್ಣುತೆಯ ನಡವಳಿಕೆಯನ್ನು ನೂರಕ್ಕೆ ನೂರರಷ್ಟು ಕಂಡಿದೆ ಎಂದು ನಾವು ನಮ್ಮ ಚರಿತ್ರೆಯನ್ನು ನೋಡಿದಾಗ, ಧೈರ್ಯವಾಗಿ ಹೇಳಲಾರೆವು. ಅದೊಂದು ಪಾಲಿಸಬೇಕಾದ ಮೌಲ್ಯ ಎಂಬ ಎಚ್ಚರ ಮತ್ತು ಅರಿವು ಮಾತ್ರ ಈ ದೇಶದಲ್ಲಿ ಹಿಂದಿನಿಂದಲೂ ಇತ್ತು, ಎನ್ನುವುದನ್ನು ನಾವು ಮರೆಯುವ ಹಾಗಿಲ್ಲ. ನಾನಾಗಲಿ, ನೀವಾಗಲಿ, ನಮ್ಮ ನಮ್ಮ ವೈಯಕ್ತಿಕ ನಂಬಿಕೆಗಳು, ನಿಷ್ಠೆಗಳು ಏನೇ ಇದ್ದರೂ, ಇನ್ನೊಬ್ಬರ ವೈಯಕ್ತಿಕ ನಂಬಿಕೆ ನಿಷ್ಠೆಗಳನ್ನು ಒಪ್ಪದೇ ಇದ್ದರೂ. ಸಹಿಸುವ ಸಂಸ್ಕೃತಿಯನ್ನು ಬೆಳೆಸಿಕೊಳ್ಳಬೇಕಾದದ್ದಿದೆ. ಈ ದೇಶದ ಪರಂಪರೆಯನ್ನು ಪ್ರಶ್ನಿಸುವವರಿಗೆ ಮಾತ್ರವಲ್ಲ : ಅದನ್ನು ಒಪ್ಪಿ ಆರಾಧಿಸುವವರಿಗೂ ಈ ಮಾತು ಅನ್ವಯಿಸುತ್ತದೆ.

---

* ಡಿಸೆಂಬರ್ ೨, ೧೯೯೦ ರಂದು ಮೈಸೂರಿನಲ್ಲಿ ಪ್ರಜ್ಞಾವಂತ ನಾಗರಿಕ ವಿಚಾರ ವೇದಿಕೆ ಏರ್ಪಡಿಸಿದ ವಿಚಾರ ಸಂಕಿರಣದಲ್ಲಿ ಮಾಡಿದ ಭಾಷಣದ ಸಂಗ್ರಹ ರೂಪ. ಸಂಗ್ರಹಕ್ಕೆ ಇಳಿಸುವಲ್ಲಿ ನೆರವು ನೀಡಿದ ಶ್ರೀ ಟಿ. ಸುಬ್ರಹ್ಮಣ್ಯಂ ಅವರಿಗೆ ಕೃತಜ್ಞನಾಗಿದ್ದೇನೆ.

ಇಂದು ನಮಗೆ ಎದುರಾಗಿರುವ ಸಮಸ್ಯೆ ತುಂಬ ಜಟಿಲವಾಗಿದೆ. ಧರ್ಮಾಂಧತೆಯ ಸೋಂಕು ತಟ್ಟಿದವರೇ ದೇಶದ ಎಲ್ಲೆಲ್ಲೂ ಕಾಣಿಸುತ್ತಿದ್ದಾರೆ. ಇನ್ನೊಬ್ಬರನ್ನು, ಅವರ ಧಾರ್ಮಿಕ ನಂಬಿಕೆಗಳನ್ನು, ಸಹಿಸಬೇಕು ಅನ್ನುವ ವಿಷಯ ಅಂಥವರಿಗೆ ಗೊತ್ತಾಗುವುದಿಲ್ಲ ಅಂಥಲ್ಲ. ಗೊತ್ತಿದ್ದರೂ ವೈಯಕ್ತಿಕ ಸ್ವಾರ್ಥವೋ, ಜಾತಿ-ವರ್ಗಸಂಬಂಧವಾದ ಸ್ವಾರ್ಥವೋ ಕಾರಣವಾಗಿ ಗೊತ್ತಿಲ್ಲದಿದ್ದವರ ಹಾಗೆ ನಟಿಸುತ್ತಾ ಇರುವುದನ್ನು ನಾವು ಕಾಣುತ್ತಿದ್ದೇವೆ. ಈ ದೇಶದಲ್ಲಿ ಮತ ಧರ್ಮದ ನಂಬಿಕೆಗೆ ಮೊದಲಸ್ಥಾನ ಕೊಡಬೇಕೋ, ರಾಷ್ಟ್ರಪ್ರೇಮಕ್ಕೆ ಮತ್ತು ರಾಷ್ಟ್ರಕ್ಷೇಮಕ್ಕೆ ಮೊದಲಸ್ಥಾನ ಕೊಡಬೇಕೊ ಎಂಬ ಪ್ರಶ್ನೆ ಈಗ ನಮ್ಮೆದುರು ನಿಂತಿದೆ. 'ಪ್ರಜ್ಞಾವಂತ ನಾಗರಿಕ'ರಾದದರು ಇಂದು ಎದುರಿಸಬೇಕಾದ, ಉತ್ತರಿಸಬೇಕಾದ ಮೊದಲ ಪ್ರಶ್ನೆ ಇದು ಎಂದು ನಾನು ಅಂದುಕೊಂಡಿದ್ದೇನೆ. ಈ ಪ್ರಶ್ನೆಗೆ ನಾವು ನೀಡುವ ಉತ್ತರ ನಮ್ಮ ನಮ್ಮ ಆತ್ಮಸಾಕ್ಷಿಗೆ ಅನುಗುಣವಾಗಿರಬೇಕು. ಹಾಗೆ ಆದದ್ದಾದರೆ ಈ ದೇಶಕ್ಕೆ ಭಯವಿಲ್ಲ ; ಅಪಾಯವಿಲ್ಲ. ಆದರೆ ಆತ್ಮಸಾಕ್ಷಿಯೇ ಒಂದು ತೊಡಕು ಎಂದು ಭಾವಿಸಿ, ಒಳದನಿಯನ್ನೇ ಹತ್ತಿಕ್ಕಿ ತಂತ್ರ ಕುತಂತ್ರಗಳನ್ನು ನಡೆಸುವದಕ್ಕೆ 'ಪ್ರಜ್ಞಾವಂತ ನಾಗರಿಕ'ರೆನಿಸಿಕೊಂಡ ಜನರೂ ಸಜ್ಜಾಗಿರುವುದನ್ನು ನಾವು ಈಗ ದೇಶಾದ್ಯಂತ ಕಾಣುತ್ತಿದ್ದೇವೆ. ಇದು ದೊಡ್ಡ ದುರಂತ.

ಮತಧರ್ಮಗಳ ಉಗಮದ ಹಿನ್ನೆಲೆಯನ್ನು ಸ್ಥೂಲವಾಗಿ ಹೀಗೆ ಹೇಳಬಹುದು: ದೈವೇಚ್ಛೆಯಿಂದ ಈ ಜಗತ್ತು ನಿರ್ಮಾಣವಾಗಿದೆ ; ಎಲ್ಲರೂ ಅದರ ಇಚ್ಛೆಗೆ ಅನುಗುಣವಾಗಿ ಸೃಷ್ಟಿಯಾದವರು. ನಮ್ಮ ನಿಮ್ಮ ಎಲ್ಲರ ನಡವಳಿಕೆಗಳೂ ಅದರಿಂದ ನಿರ್ದೇಶಿತವಾಗುತ್ತವೆ ; ನಿಯಂತ್ರಿತವಾಗುತ್ತವೆ. ಅಂದರೆ ಪರಮ ಸಂಕಲ್ಪ (Supreme Will) ಒಂದಿದೆ ; ಎಲ್ಲರ ಬದುಕು ಅದರ ನಿಯಂತ್ರಣದಲ್ಲಿ ವ್ಯವಸ್ಥೆಗೊಂಡಿದೆ, ನಿರ್ದೇಶಿತವಾಗಿದೆ. ಇದು ಎಲ್ಲರೂ ಒಪ್ಪಿಕೊಳ್ಳಬೇಕಾದದ್ದು— ಈ ರೀತಿಯ ಆಸ್ತಿಕ ನಂಬಿಕೆಯ ನೆಲೆಯಿಂದ ಬಹುತೇಕ ಎಲ್ಲ ಧರ್ಮಗಳೂ ಹುಟ್ಟಿಕೊಂಡಿವೆ. ಬೌದ್ಧಧರ್ಮ ಈ ಮಾತಿಗೆ ಸ್ವಲ್ಪ ಹೊರತಾಗಬಹುದು. ಯಾರು ನಿರ್ದೇಶಿಸುತ್ತಿದ್ದಾರೆ? ಶಿವನೋ, ವಿಷ್ಣುವೊ, ಅಲ್ಲಾನೊ ಇನ್ನಾರೋ ಎಂಬುದು ಅವರವರ ನಂಬಿಕೆಗೆ, ವ್ಯಾಖ್ಯಾನಕ್ಕೆ ಅನುಗುಣವಾಗಿ ವ್ಯತ್ಯಾಸವಾಗುವಂಥದು. ಒಟ್ಟಿನಲ್ಲಿ ಮೂಲತಃ ನಂಬಿಕೆಯ ನೆಲೆಯಿಂದ ನಮ್ಮ ಮತ್ತು ಪರಿಸರದ ಬದುಕನ್ನು, ಒಟ್ಟು ಪ್ರಪಂಚವನ್ನು ಅದರ ಆಗುಹೋಗುಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಹೊರಟ ಮನಸ್ಸು ಈ ಮತಧರ್ಮಗನ್ನು ಸೃಷ್ಟಿಸಿದೆ.

ಇದಕ್ಕೆ ಹೊರತಾದ ಇನ್ನೊಂದು ಚಿಂತನೆಯೂ ಇದೆ. ಅದು ಕಾರಣವಾದಿ (Rationalist) ಚಿಂತನೆ. ನಾವು ಹುಟ್ಟುವದಕ್ಕೆ ಮೊದಲು ಏನಾಗಿದ್ದೆವೆಂಬುದು ನಮಗೆ ಗೊತ್ತಿಲ್ಲ. ಸತ್ತನಂತರ ಬೂದಿಯೋ, ಮಣ್ಣೋ ಆಗುತ್ತೇವೆಂಬುದರ ಹೊರತಾಗಿ ಬೇರೆ ಏನೂ ಗೊತ್ತಿಲ್ಲ. ಈಗ ನಾವು, ನೀವು ಬದುಕುತ್ತಾ ಇರುವಷ್ಟು ಕಾಲ, ನಮ್ಮ ನಡುವಿನ ಮನುಷ್ಯ ಸಂಬಂಧಗಳಲ್ಲಿ ಜೀವನದ ಅರ್ಥವನ್ನು ಕಂಡುಕೊಳ್ಳಬೇಕು. ನಾವೆಲ್ಲ ಸೌಹಾರ್ದಯುತವಾಗಿ, ಅರ್ಥಪೂರ್ಣವಾಗಿ ಬಾಳುವ ಬಗೆಯನ್ನು ರೂಪಿಸಿಕೊಳ್ಳಬೇಕು. ಮಾನವೀಯತೆ, ಅಂತಃಕರಣ ನಮ್ಮೆಲ್ಲರ ಬಾಳನ್ನು ಬೆಳೆಸುವಂತಾಗಬೇಕು. ನಮ್ಮೆಲ್ಲರ ತಿಳಿವಳಿಕೆ ಬುದ್ಧಿಶಕ್ತಿ ಅದಕ್ಕೆ ವಿನಿಯೋಗವಾಗಬೇಕು. ಇಂಥ ಬದುಕುವ ದಾರಿಯನ್ನು ಹುಡುಕಿಕೊಂಡು ಹೋಗುವ ಒಂದು ದೃಷ್ಟಿ ಧೋರಣೆ ಕಾರಣವಾದಿಯೆಂದು. ಈ ರೀತಿಯ ಚಿಂತನೆ ಮನುಷ್ಯ ಪ್ರಯತ್ನದ ವಿಷಯದಲ್ಲಿ ವಿಶ್ವಾಸವನ್ನು ಬೆಳೆಸುವಂಥದು.

ಮತಧರ್ಮದ ದೃಷ್ಟಿ, ಧೋರಣೆ ದೈವಸಂಕಲ್ಪದ ಮೇಲೆ ಅಪಾರವಾದ ನಂಬಿಕೆ ಇಟ್ಟುಕೊಂಡು ವ್ಯವಹರಿಸುವಂಥದು. ದೈವ ಸಂಕಲ್ಪ, ದೈವೇಚ್ಛೆಯನ್ನು ನಂಬಿಕೊಂಡಾಗ ನಾವು ದೀನರಾಗಿ, ದೈನ್ಯಭಾವದಲ್ಲಿ ಬದುಕನ್ನು ಸಾಗಿಸುತ್ತೇವೆ. ಎದುರಿಸುತ್ತೇವೆ. ಕಾರಣವಾದಿ ಚಿಂತನೆಯಲ್ಲಿ ಈ ದೈನ್ಯ ಭಾವವಿರುವದಿಲ್ಲ; ಅಹಂಕಾರವೂ ಇರುವದಿಲ್ಲ. ಅದೊಂದು ವಿನಯದ ದಾರಿ. ನಮ್ಮ ನಮ್ಮ ಶಕ್ತಿಯ ಮಿತಿ, ಮೇರೆ ನಮಗೆ ಗೊತ್ತಿದೆ. ಆ ಮಿತಿ, ಮೇರೆಯಲ್ಲಿಯೇ ಆದರೂ ನಾವು ನಮ್ಮ ಪ್ರಜ್ಞಾವಂತಿಕೆಯಿಂದ, ವಿವೇಕದಿಂದ ವ್ಯವಹರಿಸಿದರೆ, ನಮ್ಮ ಪರಿಸರವನ್ನು ಇನ್ನಷ್ಟು ಚಂದ ಮಾಡಿಕೊಳ್ಳಬಹುದು ಎಂಬ ಆತ್ಮ ವಿಶ್ವಾಸ ಈ ಬಗೆಯ ಚಿಂತನೆಯಲ್ಲಿ ಇರುತ್ತದೆ.

ನಮ್ಮದು ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡಿರುವ ದೇಶ. ಪ್ರಜಾಪ್ರಭುತ್ವವು ಮನುಷ್ಯ ಪ್ರಯತ್ನದ ಮೇಲೆ ವಿಶ್ವಾಸ ಇರುವಂಥ ರಾಜ್ಯಪದ್ಧತಿ. ನಾವು ಬಹುಸಂಖ್ಯಾತರು ಮನಸ್ಸು ಮಾಡಿದರೆ ಈಗಿರುವ ಸ್ಥಿತಿಯಿಂದ ದೇಶವನ್ನು ಉತ್ತಮ ಸ್ಥಿತಿಗೆ ತೆಗೆದುಕೊಂಡು ಹೋಗಬಲ್ಲೆವು; ಅದು ನಮ್ಮಿಂದ ಸಾಧ್ಯ ಎನ್ನುವಂಥ ಒಂದು ಆತ್ಮವಿಶ್ವಾಸವನ್ನು ಪ್ರಜಾಪ್ರಭುತ್ವ ಬೆಳೆಸುತ್ತದೆ. ನಮ್ಮ ಬದುಕಿನ, ನಮ್ಮ ದೇಶದ ಬದುಕಿನ ಇಂದಿನ ಸ್ಥಿತಿಯನ್ನು ನಮ್ಮ ಆದರ್ಶ ಪರಿಕಲ್ಪನೆಗೆ ಅನುಗುಣವಾಗಿ, ನಮಗೆ ಬೇಕಾದ ಹಾಗೆ ನಾವು ಪರಿವರ್ತಿಸಬಲ್ಲೆವು ಎಂಬ ಒಂದು ವಿಶ್ವಾಸವನ್ನು ಈ ರಾಜ್ಯ ಪದ್ಧತಿ ಬೆಳೆಸುತ್ತದೆ. ಇದು ಮನುಷ್ಯನ ಚೈತನ್ಯದ ಬಗ್ಗೆ, ಶಕ್ತಿಯ ಬಗ್ಗೆ, ಸಂಕಲ್ಪದ ಬಗ್ಗೆ ಭರವಸೆಯನ್ನು ಬೆಳೆಸುತ್ತದೆ. ಕಾರಣವಾದೀ ಚಿಂತನೆಯಂತೆಯೆ ಮನುಷ್ಯ ಪ್ರಯತ್ನದಲ್ಲಿ ಇದು ವಿಶ್ವಾಸವನ್ನಿಟ್ಟಿರುವಂಥದು. ಮನುಷ್ಯ ಸಂಬಂಧದಲ್ಲಿ ಗೌರವ, ವಿಶ್ವಾಸ ಇಟ್ಟುಕೊಂಡು ಒಂದು ಸುಖೀ ಸಮಾಜದ, ಸುಖೀ ರಾಷ್ಟ್ರ ನಿರ್ಮಾಣದ ಕನಸು ಮತ್ತು ಸಂಕಲ್ಪದಲ್ಲಿ ಸಾಗು

ವಂಥದು. ಜೊತೆಗೇ ಅದು ಮತ ಧರ್ಮ ಪರವಾದಂಥ, ದೈವ ಸಂಕಲ್ಪ, ದೈವೇಚ್ಛೆ, ದೈವಭಕ್ತಿ ಇವುಗಳನ್ನು ಕುರಿತ ನಂಬಿಕೆಗಳನ್ನು ವೈಯಕ್ತಿಕ ನೆಲೆಯಲ್ಲಿ ಒಬ್ಬ ವ್ಯಕ್ತಿಯೊ, ಸಮೂಹದ ನೆಲೆಯಲ್ಲಿ ಅನೇಕರೊ ಉಳಿಸಿಕೊಂಡಿದ್ದರೆ ಅದನ್ನು ಆಕ್ಷೇಪಿಸಬೇಕಾಗಿಲ್ಲ, ನಿಷೇಧಿಸಬೇಕಾಗಿಲ್ಲ ಎಂಬ ಮಾನವೀಯ ದೃಷ್ಟಿ, ಸಹಿಸುವ ಸಂಸ್ಕೃತಿ ಉಳ್ಳಂಥದು. ಈ ದೇಶದ ಸಂವಿಧಾನವನ್ನು ರಚಿಸಿದವರಿಗೆ ಈ ವಿವೇಕ ಇತ್ತು. ಇಡೀ ಸಂವಿಧಾನದ ವಿಧಿಗಳನ್ನು ಒಟ್ಟಾರೆಯಾಗಿ ವಿಶ್ಲೇಷಿಸಿದರೆ, ಈ ಸಂವಿಧಾನ ಜಾತಿ-ಮತ-ಧರ್ಮ ನಿರಪೇಕ್ಷ ರಾಷ್ಟ್ರ ಕಟ್ಟುವ ಒಂದು ಉಪಕರಣ ಎಂಬುದು ಗೊತ್ತಾಗುತ್ತದೆ. ಇದನ್ನು ಸ್ಪಷ್ಟಪಡಿಸುವ ಉದ್ದೇಶದಿಂದ, ಸಂವಿಧಾನಕ್ಕೆ ತಂದ ೪೨ ನೆಯ ತಿದ್ದುಪಡಿ ಮೂಲಕ ಸಂವಿಧಾನದಲ್ಲಿ 'ಜಾತ್ಯತೀತ' (ಸೆಕ್ಯುಲರ್) ಎಂಬ ಮಾತನ್ನು ಸೇರಿಸಲಾಯಿತು: ಅಭಿಪ್ರಾಯವಿಷ್ಟೆ: ಜಾತಿ-ಮತ ಧರ್ಮನಿರಪೇಕ್ಷವಾದ ರಾಷ್ಟ್ರವನ್ನು ಕಟ್ಟುವ ಪ್ರಜ್ಞೆಯನ್ನು ನಮ್ಮ ಸಂವಿಧಾನ ಉಳಿಸಿಕೊಂಡಿದೆ.

ಎಲ್ಲಿಯುವರೆಗೂ ನಮ್ಮ ನಮ್ಮ ನಂಬಿಕೆಗಳು, ಜೀವನದ ಬಗೆಗಿನ ದೃಷ್ಟಿಕೋನಗಳು, ನಿಲುವು ನೋಟಗಳು ಇತರರ ಬದುಕಿನ ಸ್ವಾರಸ್ಯವನ್ನು ಕೆಡಿಸುವುದಿಲ್ಲವೋ, ಇತರರ ಹಕ್ಕಿನ ಅತಿಕ್ರಮಣ ಮಾಡುವಂತಹ ಅವಿವೇಕವನ್ನು ತೋರಿಸುವುದಿಲ್ಲವೋ ಅಲ್ಲಿಯುವರೆಗೂ ಅವುಗಳನ್ನು ಇಟ್ಟುಕೊಳ್ಳಬಹುದು: ಹಾಗೆ ನಡೆದುಕೊಳ್ಳಬಹುದು. ನಮಗೆ ಆ ಹಕ್ಕಿದೆ. ಇದೂ ಪ್ರಜಾಪ್ರಭುತ್ವ ನಮ್ಮೆದುರು ಇಟ್ಟಿರುವ ಒಂದು ತತ್ವ; ಮನೋಧರ್ಮ, ಇದನ್ನು ನಾವು ನಮ್ಮಂಥ ಬಹುಮುಖೀ ಸಮಾಜದಲ್ಲಿ-(plural society) ಒಪ್ಪಿಕೊಳ್ಳದೇ ಇದ್ದರೆ, ಒಪ್ಪಿಕೊಂಡು ಅದನ್ನು ನಿಷ್ಠೆಯಿಂದ ಪಾಲಿಸದೆ ಇದ್ದರೆ ಇಲ್ಲದ ಗೊಂದಲಗಳಿಗೆ, ಕಷ್ಟಗಳಿಗೆ ಒಳಗಾಗುತ್ತೇವೆ. ಈಗ ನಮ್ಮ ದೇಶದಲ್ಲಿ ಆಗಿರುವಂಥದು, ಆಗುತ್ತಿರುವಂಥದು ಇಂಥ ಗೊಂದಲವೇ; ಇಂಥ ಕಷ್ಟವೇ. ಮತ ಧರ್ಮಪರವಾದ ಅಂಧನಿಷ್ಠೆ ಇಂಥ ಗೊಂದಲಕ್ಕೆ ಕಾರಣವಾಗಿದೆ; ಬಿಕ್ಕಟ್ಟಿಗೆ ಕಾರಣವಾಗಿದೆ. ಇದು ಆತಂಕಕ್ಕೆ, ಕಳವಳಕ್ಕೆ ಕಾರಣವಾಗಿದೆ.

ಮತಧರ್ಮಪರವಾದ ಅಂಧನಿಷ್ಠೆಯ ಕಾರಣದಿಂದಾಗಿ ದೇಶಕ್ಕೆ ಸ್ವಾತಂತ್ರ್ಯ ಬರುತ್ತಿರುವಾಗಲೇ ದೇಶ ಹೋಳಾಯಿತು. ಆ ಚರಿತ್ರೆಯನ್ನು ನಾವೇ-ನಮ್ಮ ಕಣ್ಣೆದುರೇ ಕಂಡಿದ್ದೇವೆ. ಮುಹಮ್ಮದೀಯರಿಗೆಂದು ಒಂದು ದೇಶ ಆಗಬೇಕೆಂದಾಯಿತು. ಅದು ಆಗಿಯೂ ಆಯಿತು. ಆ ಕಾಲದಲ್ಲಿ ಮೌಲಾನಾ ಅಬ್ದುಲ್ ಕಲಂ ಆಜಾದರಂಥ ರಾಷ್ಟ್ರೀಯವಾದಿ ಧುರೀಣರ ಮಾತಿಗಿಂತ ಜಿನ್ನಾರಂಥ ಮತಧರ್ಮಪರವಾದೀ ನಾಯಕರ ಮಾತು ನಡೆದುಬಿಟ್ಟಿತು. ದೇಶ ಭಾರತ-ಪಾಕಿಸ್ತಾನ ಎಂದು

ಹೋಳಾದ ಚರಿತ್ರೆ ಧರ್ಮಾಂಧತೆಯ ಕಾರಣದಿಂದಾಗಿ ಆಯಿತೆಂಬುದನ್ನು ನಾವು-ನೀವು ಎಲ್ಲಾ ಒಪ್ಪಿಕೊಳ್ಳುತ್ತಿದ್ದೇವೆ, ಅಲ್ಲವೇ ? ಅದರಿಂದಾಗಿ ನಾಚಿಕೆಪಟ್ಟು ಕೊಳ್ಳುವಂಥ, ದುಃಖಪಟ್ಟುಕೊಳ್ಳುವಂಥ ಪರಿಸ್ಥಿತಿ ಈ ದೇಶದ ಚರಿತ್ರೆಯಲ್ಲಿ ಉಂಟಾಯಿತೋ ಇಲ್ಲವೋ ? ಆ ಕಾಲದಲ್ಲಿ ಧರ್ಮಾಂಧರಾದ ಹಿಂದುಗಳು, ಧರ್ಮಾಂಧರಾದ ಮುಸ್ಲಿಮರು ಧರ್ಮದ ಹೆಸರಿನಲ್ಲಿ ನಡೆದುಕೊಂಡ ರೀತಿ: ಕೊಲೆ ಸುಲಿಗೆ ಮಾಡಿದ ರೀತಿ-ಇವು ಮೃಗಪ್ರಭುತ್ವದ ರೀತಿಗಿಂತ ಬೇರೆಯಾಗಿರಲಿಲ್ಲ. ವಿಶ್ವ ಮಹಾಯುದ್ಧಗಳಲ್ಲಿ ಸತ್ತ ಜನಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಆಗ ಇಲ್ಲಿ ಜನ ಸತ್ತರು ಎಂದು ಕೂಡ ಕೆಲವರು ಹೇಳುತ್ತಾರೆ. ಆ ಅಂಕಿ-ಅಂಶಗಳ ವಿವರ ನನಗೆ ಸರಿಯಾಗಿ ಗೊತ್ತಿಲ್ಲ. ಲೆಕ್ಕ ಸ್ವಲ್ಪ ಹೆಚ್ಚು ಕಡಿಮೆ ಇರಬಹುದು. ಆದರೆ ಉಂಟಾದ ಕ್ಷೋಭೆ, ಹಿಂಸೆಯ ರೀತಿ ಇದೆಯಲ್ಲಾ ಅದನ್ನು ನೆನಸಿಕೊಂಡಾಗ ಈ ಉಪಖಂಡ ಯಾವ ಕಾಲಕ್ಕೂ ತಲೆ ತಗ್ಗಿಸುವಂತಾಗಿದೆಯೆ ಹೊರತು ಅಭಿಮಾನ ಪಟ್ಟುಕೊಳ್ಳುವಂತಾಗಿಲ್ಲ ಎಂದು ಯಾರಿಗಾದರೂ ಅನಿಸುತ್ತದೆ. ಅದರ ಕಾರಣ ದಿಂದಾಗಿ ಇಂದಿಗೂ ಕಾಶ್ಮೀರದ ಸಮಸ್ಯೆ ನಮಗೊಂದು ಹುಣ್ಣಾಗಿಯೇ ಉಳಿದಿದೆ. ದಿನಬೆಳಗಾದರೆ ಕಾಶ್ಮೀರದಲ್ಲಿ ಮತಾಂಧತೆ ಏನೇನು ಅನಾಹುತ ಮಾಡುತ್ತಿದೆ ಎಂಬು ದನ್ನು ನಾವು ನೋಡುತ್ತಿದ್ದೇವೆ: ಕೇಳುತ್ತಿದ್ದೇವೆ. ಮತಾಂಧತೆಯಿಂದ ಆಗುತ್ತಿರುವ ಆ ಹಿಂಸೆಯನ್ನು ನಾವು ಒಪ್ಪಿಕೊಂಡಿದ್ದೇವೆಯೆ ? ಅದು ಸರಿಯಾದದ್ದೇ ಎಂದು ಹೇಳುತ್ತಿದ್ದೇವೆಯೆ ? ಅದನ್ನು ಸಮರ್ಥಿಸುತ್ತಿದ್ದೇವೆಯೇ ?

ಧರ್ಮಾಂಧತೆಯಿಂದಾಗಿ ಪಂಜಾಬಿನಲ್ಲಿ ಖಾಲಿಸ್ತಾನದ ಹೆಸರಿನಲ್ಲಿ ದಿನಬೆಳಗಾದರೆ ಸಿಖ್ ಧರ್ಮಾಂಧರು ನಡೆಸುತ್ತಿರುವ ಹತ್ಯಾಕಾಂಡಗಳ ವರದಿಗಳನ್ನು ಕೇಳುತ್ತಾ, ದೂರದರ್ಶನಗಳಲ್ಲಿ ಆ ದೃಶ್ಯಗಳನ್ನು ನೋಡುತ್ತಾ, ಮರುಗುತ್ತಾ, ನೊಂದು ಕೊಳ್ಳುತ್ತಾ, ಈ ದೇಶದಲ್ಲಿ ಹೀಗೆ ಆಗುತ್ತಿದೆಯಲ್ಲಾ ಎಂದು ಅವಮಾನ ಪಡುತ್ತಾ ಏನು ಮಾಡಬೇಕೆಂದು ತೋರದಿರುವಂಥ ಅಸಹಾಯಕ ಸ್ಥಿತಿಯಲ್ಲಿ ನಾವೆಲ್ಲ ಇದ್ದೇವೆ, ಅಲ್ಲವೆ ? ನಮ್ಮಂಥವರು ಐವತ್ತು ವರ್ಷ ದಾಟಿದ್ದೇವೆ. ಹೇಗೋ ಬದುಕಿನಾಟದಲ್ಲಿ ಒಂದು ಮಟ್ಟಕ್ಕೆ ನಮ್ಮ ಪಾಲಿನ ಬ್ಯಾಟ್ ಮಾಡಿದ್ದೇವೆ; ಅರ್ಧ ಸೆಂಚುರಿ ಆದ ಮೇಲೆ ಔಟಾದರೂ ಪರವಾಗಿಲ್ಲ ಅನ್ನೋಣ, ಬೇಕಾದರೆ. ಆದರೆ, ನಮ್ಮ ಮಕ್ಕಳ ಕಡೆ, ಮೊಮ್ಮಕ್ಕಳ ಕಡೆ ನೋಡಿದಾಗ ಈ ದೇಶದ ಸ್ಥಿತಿ ಹೀಗೇ ಮುಂದುವರಿದರೆ ಇವರ ಗತಿ ಏನು ? ಎಂಬ ಪ್ರಶ್ನೆ ಎದುರಾಗುತ್ತದೆಯಲ್ಲವೆ ? ಮನಸ್ಸಿಗೆ ವಿಷಾದ ಕವಿಯುತ್ತದೆಯಲ್ಲವೆ ? ಅಂಥ ಸ್ಥಿತಿಯನ್ನು ನಾವು ಸಮರ್ಥಿಸು ತ್ತಿದ್ದೇವೆಯೆ ? ಇವೆಲ್ಲ ತಪ್ಪು, ಅಮಾನವೀಯ ಎಂದು ನಮಗೆ ನಿಜವಾಗಿ, ಅಂತಃ ಸಾಕ್ಷಿ ಪೂರ್ವಕವಾಗಿ ಅನಿಸುತ್ತದೆಯಲ್ಲವೆ ? ಬಿ. ಜೆ. ಪಿ. ಹಿಂದೂಮಹಾಸಭಾ ಮೊದಲುಗೊಂಡು ಈ ದೇಶದ ರಾಜಕೀಯ ಪಕ್ಷಗಳೆಲ್ಲವೂ ಕಾಶ್ಮೀರ, ಪಂಜಾಬ್

ಗಳಲ್ಲಿ ನಿರ್ಮಾಣವಾದ ಪರಿಸ್ಥಿತಿ ದೇಶಕ್ಕೆ ಗಂಡಾಂತಕಾರಿ. ತಪ್ಪು ಎಂದು ಖಂಡಿಸಿ ವೆಯಲ್ಲವೆ ? ಹಾಗಿರುವಾಗ ಬಹು ಸಂಖ್ಯಾತರಾಗಿರುವ ಹಿಂದುಗಳನ್ನು ಮತ್ತೆ ಮತಾಂಧತೆಯ ಕೂಪಕ್ಕೆ ತಳ್ಳಿ, ಅವರಲ್ಲಿ ಆಕ್ರೋಶವನ್ನು ಎಬ್ಬಿಸಿ, ದೇಶವನ್ನು ಒಂದು 'ಆಂತರಿಕ ಯುದ್ಧ'ದ-'ಸಿವಿಲ್ ವಾರ್'ನ ವಾತಾವರಣಕ್ಕೆ ತಳ್ಳುವಂಥ ಪರಿಸ್ಥಿತಿಯನ್ನು ನಿರ್ಮಾಣ ಮಾಡುವುದು ಸರಿಯೆ ? ಇಂಥ ಒಂದು ವಾತಾವರಣ ವನ್ನು ನಿರ್ಮಾಣ ಮಾಡುವುದು ಎಂಥ ಅವಿವೇಕ ಎಂಬುದನ್ನು ಪ್ರತಿಯೊಬ್ಬರೂ ತಿಳಿದುಕೊಳ್ಳಬೇಕಾಗಿದೆ.

ಹಾಗೆಂದು ಅಲ್ಪ ಸಂಖ್ಯಾತರು ಮಾಡುತ್ತಿರುವುದೆಲ್ಲ, ಬಯಸುತ್ತಿರುವುದೆಲ್ಲ ಸರಿ ಎಂದು ನಾನು ಹೇಳುತ್ತಿಲ್ಲ. ಹಿಂದೂ ಕಾನೂನು, ಮುಹಮ್ಮದೀಯ ಕಾನೂನು ಹೀಗೆ ಮತಧರ್ಮ ಸಂಬಂಧವಾದ ಖಾಸಗೀ ಕಾನೂನುಗಳು ಅಂದರೆ 'ಪರ್ಸನಲ್ ಲಾ'ಗಳು ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಪ್ರತ್ಯೇಕವಾಗಿ ಇರೋದು ಕೂಡ ಉಚಿತವಲ್ಲ ಎಂದೇ ನಾನು ಹೇಳುವವನು. 'ಸೆಕ್ಯುಲರ್' ದೇಶಕ್ಕೆ ಒಂದೇ ಬಗೆಯ ಜಾತಿ-ಮತ-ಧರ್ಮ ನಿರಪೇಕ್ಷವಾದ ಒಂದು ಸಾಮಾನ್ಯ ಕಾನೂನು (common law) ಇರುವುದೇ ಸೂಕ್ತ ಎಂದು ಹೇಳುವವನು ನಾನು. ಆದರೆ ರಾಷ್ಟ್ರ ಜೀವನದಲ್ಲಿ ಒಂದೇ ದಿನದಲ್ಲಿ ಅಥವಾ ಕೆಲವೇ ವರ್ಷಗಳಲ್ಲಿ ಎಲ್ಲ ಸಮಸ್ಯೆಗಳನ್ನು ಬಗೆಹರಿಸುವುದ ಕ್ಕಾಗುವದಿಲ್ಲವೆಂಬ ವಾಸ್ತವ ಪ್ರಜ್ಞೆಯೂ ನಮಗೆ ಇರಬೇಕು. ಅದಕ್ಕೆ ಸೂಕ್ತವಾದ ಕಾರ್ಯಕ್ರಮಗಳನ್ನು ಹಾಕಿಕೊಂಡು ಕ್ರಮಕ್ರಮವಾಗಿ ಸಂಬಂಧಪಟ್ಟ ಜನರಿಗೆ ತಿಳಿವಳಿಕೆ ನೀಡುತ್ತಾ ಬದಲಿಸುತ್ತಾ ಹೋಗಬೇಕಾದ ಅನಿವಾರ್ಯತೆ ಇರುವುದು ಚರಿತ್ರೆಯನ್ನು ಬಲ್ಲ ಎಲ್ಲರಿಗೂ ಗೊತ್ತಿರುವಂಥದು. ಆ ಕಾರಣಕ್ಕಾಗಿಯೂ ನಮಗೆ ಪೂರ್ಣ ಸರಿಯಲ್ಲ ಎನಿಸುವುದನ್ನೂ ಸಹಿಸಿಕೊಳ್ಳುವ ಸಂಸ್ಕೃತಿಯನ್ನು ಬಹುಸಂಖ್ಯಾತ ರಾದ ನಾವು ಉಳಿಸಿಕೊಂಡು, ರೂಢಿಸಿಕೊಂಡು ನಿಧಾನವಾಗಿ ಪರಿವರ್ತನೆಯ ಪ್ರೇರಣೆಗಳನ್ನು ಹುಟ್ಟಿಸುತ್ತಾ ಹೋಗಬೇಕಾಗಿದೆ. ಹಾಗಲ್ಲದೆ, ರಾಷ್ಟ್ರ ಪ್ರೇಮ ಕ್ಕಿಂತ ರಾಷ್ಟ್ರ ಕ್ಷೇಮಕ್ಕಿಂತ ಮೊದಲನೆಯ ಆದ್ಯತೆಯಾಗಿ ಧರ್ಮಾಂಧತೆಯನ್ನೇ ಮತೀಯ ವಾದವನ್ನೇ ಆಯ್ಕೆ ಮಾಡಿಕೊಳ್ಳಲು ಹೊರಟರೆ, ಅದನ್ನೇ ಘೋಷಿಸುತ್ತ ಹೋದರೆ ಈ ದೇಶಕ್ಕೆ ಒಳ್ಳೆಯ ಭವಿಷ್ಯ ಇರುವುದಕ್ಕೆ ಸಾಧ್ಯವೇ ಇಲ್ಲ, ಎಂಬ ಅರಿವು ಎಲ್ಲರಲ್ಲಿಯೂ ಉಂಟಾಗಬೇಕಾಗಿದೆ. ಮತಾಂಧತೆಯನ್ನು ಮತೀಯವಾದ ವನ್ನು ಸಮರ್ಥಿಸಿಕೊಳ್ಳುವುದಕ್ಕೆ ನಾವು ಯಾವ ಯಾವುದೋ ರೀತಿಯ ಚಮತ್ಕಾ ರದ ವಾದಗಳನ್ನು ಮುಂದಿಡುವುದರಿಂದ ಪ್ರಯೋಜನವಿಲ್ಲ. ಪ್ರಚ್ಛನ್ನವಾದದಿಂದ ನಿಜವನ್ನು, ಸತ್ಯಸಂಗತಿಯನ್ನು ಶಾಶ್ವತವಾಗಿ ಮರೆಮಾಡುವುದು ಸಾಧ್ಯವಿಲ್ಲ.

ಮತಧರ್ಮ ಪರವಾದ ಅಂಧತೆಯನ್ನು ದೈವ ಭಕ್ತಿ ಎಂದೊ, ಧರ್ಮನಿಷ್ಠೆ ಎಂದೊ ಕೀರ್ತಿಸಿದರೂ ಅದು ಕೊನೆಗೂ ಅಂಧ ಶ್ರದ್ಧೆಯೇ ಆಗಿರುತ್ತದೆ. ಅದರ ಪರಿವೆ ಇಲ್ಲದೆ ಅಥವಾ ಅದರ ಪರಿವೆ ಇದ್ದರೂ ಜಾಣಕುರುಡರಾಗಿ ಬಿ. ಜೆ. ಪಿ. ವಿಶ್ವ ಹಿಂದೂ ಪರಿಷತ್ ಮುಂತಾದಂಥ ಪಕ್ಷ ಸಂಘಟನೆಗಳು ಅಪಾಯಕಾರಿಯಾದಂಥ ಹೆಜ್ಜೆ ಹಾಕುತ್ತಿವೆ. ಯಾವುದಕ್ಕೆ ಯಾವ ಪ್ರಮಾಣದ ಬೆಲೆ ತರುವುದಕ್ಕೆ ನಾವು ತಯಾರಾಗಿದ್ದೇವೆ, ಎಂಬ ಪ್ರಶ್ನೆ ನಮ್ಮ ಜೀವನದ ಎಲ್ಲ ಹಂತದ ತೀರ್ಮಾನ ಕೈಗೊಳ್ಳುವಾಗಲೂ ಎದುರಾಗುವಂಥದು. ದೈವಭಕ್ತಿಯಿದ್ದವರ ಭಕ್ತಿಯನ್ನು ನಾನು ಇಲ್ಲಿ ಪ್ರಶ್ನಿಸುವುದಿಲ್ಲ. ಆ ಭಕ್ತಿಯನ್ನು ಉಳಿಸಿಕೊಳ್ಳುವುದಕ್ಕೆ ಅವರಿಗೆ ಹಕ್ಕು ಇದೆ, ಆದರೆ ಆ ಭಕ್ತಿಯನ್ನು ತೋರಿಸುವುದಕ್ಕೆ ಇರುವುದು ಅದೊಂದೇ ದೇವಸ್ಥಾನವೇ? ಬೇರೆ ಲಕ್ಷಾಂತರ ದೇವಸ್ಥಾನಗಳು ಭಕ್ತಿ ಸಮರ್ಪಣೆಗೆ ಇಲ್ಲವೆ.? ಅದೇ ಜಾಗದಲ್ಲಿ ರಾಮ ಮಂದಿರ ಕಟ್ಟುವುದರ ಮೂಲವೇ ಎಲ್ಲ ಪರಿಹಾರ ಸಿಗುತ್ತದೆ; ತಮ್ಮ ಭಕ್ತಿಗೆ ಸಾರ್ಥಕತೆ ಬರುತ್ತದೆ ಅನ್ನುವ ಭಾವನೆ ಹಿಂದೂ ಭಕ್ತಾದಿಗಳಲ್ಲಿ ನಿಜವಾಗಿ ಇವೆಯೆಂದೇ ಅಂದುಕೊಳ್ಳೋಣ: ಧರ್ಮಶ್ರದ್ಧೆ ಇರುವ ಮುಸ್ಲಿಮರಲ್ಲಿಯೂ ಬಾಬರಿ ಮಸೀದಿಯ ಬಗ್ಗೆ ಅಂಥದೇ ಭಾವನೆ ಇದೆ ಎಂದೇ ಇಟ್ಟುಕೊಳ್ಳೋಣ. ಆದರೆ ಅದಕ್ಕೆ ನಾವು ಅಂದರೆ ಒಟ್ಟಿನಲ್ಲಿ ಭಾರತೀಯರು ತೆರಬೇಕಾದಂಥ ದಂಡ ಎಷ್ಟು? ಈ ಪ್ರಶ್ನೆಯನ್ನು ಕುರಿತು ಈ ದೇಶದ ಸಂದರ್ಭದಲ್ಲಿ ಹಿಂದುಗಳೂ ಮುಸ್ಲಿಮರೂ ಯೋಚನೆ ಮಾಡಬೇಡವೆ? ವಿವೇಕ ಮಾನವೀಯತೆಗಳನ್ನು ಬಿಟ್ಟು ಭಕ್ತಿ ಎಂಬುದಿದೆಯೇ? ಇರಬೇಕೆ?

ನನ್ನ ಮಿತ್ರರಾದ ಎನ್. ಬೋರಲಿಂಗಯ್ಯನವರು ರಾಮಜನ್ಮಭೂಮಿ ಬಾಬರಿ ಮಸೀದಿ ವಿವಾದ ಕುರಿತಂತೆ ಅನೇಕ ಕಡೆಗಳಿಂದ ವಿಷಯಗಳನ್ನು ಸಂಗ್ರಹಿಸಿ ಒಂದು ಪುಸ್ತಿಕೆ (Booklet) ಪ್ರಕಟಿಸಿದ್ದಾರೆ. ನಾನೂ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೆ ಸಾಕಷ್ಟು ಪ್ರಯತ್ನ ಪಟ್ಟಿದ್ದೇನೆ. ರಾಮಜನ್ಮಭೂಮಿ, ಎಂದರೆ ರಾಮ ಹುಟ್ಟಿದ ಸ್ಥಳ. ಇದೇ ಎಂದು ಸ್ಥಾಪಿಸುವುದಕ್ಕೆ ಬೇಕಾದ ಗಟ್ಟಿಯಾದ, ನಿಸ್ಸಂದೇಹವಾದ ಚಾರಿತ್ರಿಕ ಆಧಾರಗಳು ಇದ್ದಂತಿಲ್ಲ. ರಾಮ ಚಾರಿತ್ರಿಕ ವ್ಯಕ್ತಿ ಎಂದು ಸಾಧಿಸುವುದೇ ಮೊದಲಿಗೆ ಇರುವ ಕಷ್ಟ. ಆದೇನೇ ಇದ್ದರೂ ಇದು ನಂಬಿಕೆಯ ಪ್ರಶ್ನೆ: ಕೇವಲ ಚರಿತ್ರೆಯ ಪ್ರಶ್ನೆ ಅಲ್ಲ: ನಿಜ. ನಂಬಿಕೆಯನ್ನು ಇಟ್ಟುಕೊಳ್ಳುವ ಅಥವಾ ಬಿಡುವ ಬಗ್ಗೆ ನಾನು ಇಲ್ಲಿ ಏನೂ ಹೇಳುತ್ತಾ ಇಲ್ಲ. ಆದರೆ, ಆ ನಂಬಿಕೆಯನ್ನೇ ವಸ್ತುಸ್ಥಿತಿ (Fact) ಎಂದು ಸಾಧಿಸುವುದಕ್ಕೆ ಎಲ್ಲಿ, ಎಷ್ಟರ ಮಟ್ಟಿಗೆ ಮುಂದಾಗಬಹುದು?

ಈ ದಿನ ಹಿಂದುಗಳಿಗೆ ಜನಬಲ ಹೆಚ್ಚು ಇರಬಹುದು, ಮುಸ್ಲಿಮರು ಅಲ್ಪ ಸಂಖ್ಯಾತರಾಗಿರಬಹುದು. ಹಿಂದುಗಳ ಧಾರ್ಮಿಕ ನಂಬಿಕೆಗೆ ಧಕ್ಕೆ ಆಗಬಾರದು ಎಂದಾದರೆ,

ಮುಸ್ಲಿಮರದೂ ಹಿಂದೂಗಳಂಥದೇ ಧಾರ್ಮಿಕ ನಂಬಿಕೆಯಲ್ಲವೇ ಎಂಬ ಪ್ರಶ್ನೆ ಏಳುತ್ತದೆ. ಮುಸ್ಲಿಮರದೂ ನಂಬಿಕೆಯಲ್ಲದೇ ಕೇವಲ ಭಂಡಾಟದ ವ್ಯವಹಾರ ಎಂದಾಗಿದ್ದರೆ ಆಗ ಸಮಸ್ಯೆ ಈ ರೀತಿಯದಾಗಿ ಇರುತ್ತಿರಲಿಲ್ಲ. ಅದರ ಸ್ವರೂಪವೇ ಬೇರೆಯಾಗಿರುತ್ತಿತ್ತು. ಅವರದೂ ನಂಬಿಕೆಯದೇ ಆಗಿರುವುದರಿಂದ ಇದೊಂದು ದೊಡ್ಡ ಸಮಸ್ಯೆಯಾಗಿ, ಮಾನವೀಯ ಸಮಸ್ಯೆಯಾಗಿ ಎದುರುನಿಂತಿದೆ. ವೈಯಕ್ತಿಕವಾಗಿ ನನ್ನ ದೃಷ್ಟಿಯಲ್ಲಿ ಅವರ ನಂಬಿಕೆಯೂ ಅಷ್ಟೇ ಮಟ್ಟದ್ದು. ಇವರ ನಂಬಿಕೆಯೂ ಅಷ್ಟೇ ಮಟ್ಟದ್ದು. ಎರಡನ್ನೂ ವೈಚಾರಿಕವಾಗಿ ನಾನು ಸಮರ್ಥಿಸಲಾರೆ. ಅದು ಬೇರೆ ಮಾತು. ಆದರೆ, ತಮ್ಮ ನಂಬಿಕೆಯನ್ನು ಸಾಧಿಸಹೊರಡುವವರು ಇನ್ನೊಬ್ಬರ ನಂಬಿಕೆಯನ್ನು ಒಪ್ಪದಿದ್ದರೂ ಗಣಿಸಬೇಕಾದಂಥ ಹೊಣೆಗಾರಿಕೆಯಲ್ಲಿ. ಸಹಿಸಬೇಕಾದಂಥ ಸಜ್ಜನಿಕೆಯಲ್ಲಿ, ಅರ್ಥ ಮಾಡಿಕೊಳ್ಳಬೇಕಾದಂಥ ವಿವೇಕದಲ್ಲಿ ವ್ಯವಹಾರ ಮಾಡಬೇಕಾದದ್ದು ಇದೆಯೋ, ಇಲ್ಲವೊ ಎಂಬ ಪ್ರಶ್ನೆ ಬಹಳ ಮುಖ್ಯವಾದದ್ದು. ಈ ಮಾತು ಧರ್ಮ ಶ್ರದ್ಧೆ ಇರುವ ಹಿಂದೂಗಳಿಗೆ ಹೇಗೋ ಹಾಗೆ ಮುಸ್ಲಿಮರಿಗೂ ಅನ್ವಯಿಸುವಂಥದೇ. ಅದರಲ್ಲೂ ಇಂಥ ಬಿಕ್ಕಟ್ಟಿನ ಸಂದರ್ಭದಲ್ಲಿ ಬಹುಸಂಖ್ಯಾತರಾದವರ ಹೊಣೆಗಾರಿಕೆ ಹೆಚ್ಚಿನದೆಂದೇ ನನ್ನ ಭಾವನೆ. ಜನಬಲವೊ, ತೋಳ್ಬಲವೊ ಇಂಥ ಬಿಕ್ಕಟ್ಟುಗಳನ್ನು ಪರಿಹರಿಸುವ ಮಾನದಂಡಗಳಾಗಬಾರದು.

ರಾಮಜನ್ಮಭೂಮಿ-ಬಾಬರಿ ಮಸೀದಿ ವಿವಾದ ಬಗೆಹರಿಸಲು ಪರಸ್ಪರ ಒಡಂಬಡಿಕೆಗಾಗಿ ಇಂದೇ ದೇಶದ ರಾಜಧಾನಿ ದೆಹಲಿಯಲ್ಲಿ ಸಭೆ ಸೇರುತ್ತಿದ್ದಾರಲ್ಲಾ ಆ ಸಭೆ ಫಲಪ್ರದವಾಗುವುದೆಂಬ ಆಶಾಭಾವನೆ ಇಟ್ಟುಕೊಳ್ಳೋಣ. ಇಡೀ ಜಗತ್ತಿನ ಎಲ್ಲ ಮತಧರ್ಮಗಳ ಅಧ್ಯಯನ ಕೇಂದ್ರವನ್ನಾಗಿ ಆ ಸ್ಥಳವನ್ನು ಪರಿವರ್ತಿಸುವ ನಿರ್ಣಯ ಕೈಕೊಳ್ಳಬಹುದು ಅಥವಾ ಪ್ರಜಾಪ್ರಭುತ್ವದಲ್ಲಿ ನಾವೆಲ್ಲರೂ ಒಪ್ಪಿಕೊಂಡಿರುವಂತೆ ಕೊನೆಯದಾದಂಥ ತೀರ್ಮಾನವನ್ನು ಸುಪ್ರೀಂ ಕೋರ್ಟಿಗೆ ಬಿಟ್ಟು, ಆ ತೀರ್ಮಾನವನ್ನು ಎರಡೂ ಕಡೆಯವರೂ ಒಪ್ಪಿಗೊಳ್ಳಬೇಕು ಎಂಬಂಥ ಒಪ್ಪಂದಕ್ಕೆ ಬರಬಹುದು. ಸುಪ್ರೀಂ ಕೋರ್ಟಿನ ತೀರ್ಮಾನ ಪೂರ್ಣ ಒಪ್ಪಿಗೆ ಆಗಬಹುದು. ಆಗದೇ ಇರಬಹುದು. ಉಳಿದೆಲ್ಲಾ ಸಂದರ್ಭಗಳಲ್ಲಿ ಕಾನೂನುಗಳಿಗೆ ಹೇಗೆ ತಲೆಬಾಗುತ್ತೇವೆಯೊ ಹಾಗೆ ಗೌರವಯುತವಾಗಿ ತಲೆಬಾಗಿ ಒಪ್ಪಿಕೊಂಡು ಹೋಗುವಂಥ ಮನೋಭಾವವನ್ನು ಎರಡು ಕಡೆಯವರೂ ತೋರಿಸಬೇಕು. ಈ ಎರಡು ದಾರಿ ಬಿಟ್ಟು ಆ ಸಭೆಯಲ್ಲಿ ಬೇರೆ ಏನು ತೀರ್ಮಾನವಾದರೂ ಅದು ಎಷ್ಟು ವಿವೇಕದ್ದಾಗೀತು, ಎಷ್ಟು ಪರಿಣಾಮಕಾರಿಯಾದೀತು, ಎಂದು ಹೇಳುವುದು ಕಷ್ಟ.

ಮುಸ್ಲಿಮರ ಬಗ್ಗೆ ಅವರು ಹೀಗೆ ಮಾಡಿಲ್ಲವೇ, ಹಾಗೆ ಮಾಡಿಲ್ಲವೇ, ಎಂದು ಮುಂತಾಗಿ ಚರಿತ್ರೆಯನ್ನು ಕೆದಕುವ ಹವ್ಯಾಸ ಪ್ರಜ್ಞಾವಂತ ನಾಗರಿಕರು ಎಂದು

ಕೊಳ್ಳುತ್ತಿರುವವರಲ್ಲಿಯೂ ಕಾಣಿಸಿಕೊಳ್ಳುತ್ತಿದೆ. ಈ ವೇದಿಕೆಯಲ್ಲಿಯೂ ಅಂಥ ಮಾತುಗಳನ್ನು ಆಡಿದ್ದನ್ನು ನೀವು ಕೇಳಿಸಿಕೊಂಡಿದ್ದೀರಿ. ಅಂಥ ಮಾತುಗಳಿಂದ ಆಗಬಹುದಾದ ದುಷ್ಪರಿಣಾಮಗಳನ್ನು ಕುರಿತು ತಾಳ್ಮೆಯಿಂದ, ಭಾವನಾವಶರಾಗದೆ ಯೋಚನೆ ಮಾಡಬೇಕು.

ರಾಮನನ್ನು ಕುರಿತು, ರಾಮ ಮಂದಿರವನ್ನು ಕುರಿತು ಹೇಳಿ ಭಾವಾತಿರೇಕವನ್ನು ನಾಲ್ಕು ದಿನ ಎಬ್ಬಿಸಬಹುದು. ಮುಸ್ಲಿಮರ ಚರಿತ್ರೆಯನ್ನು ಕೆದಕಿ ಮುಸ್ಲಿಮರನ್ನು ಕುರಿತಂತೆ ಅಸಹನೆ ಭಾವನೆಯನ್ನು ಬೆಳಸಬಹುದು. ಬಹು ಸಂಖ್ಯಾತರು ಎನ್ನುವ ಕಾರಣದಿಂದ ಅಥವಾ ಬೇರೆ ಯಾವುದೋ ಕಾರಣದಿಂದ ಹಿಂದೂ ಅಥವಾ ಹಿಂದೂ ಸಂಘಟನೆಯ ಹೆಸರಿನಲ್ಲಿ, ಅದರ ಬಲದಲ್ಲಿ ಈ ಸಂದರ್ಭವನ್ನು ಹೇಗೋ ರಾಮ ಜನ್ಮ ಭೂಮಿ ವಾದಿಗಳ ಪರವಾಗಿ ತಿರುಗಿಸಿಕೊಳ್ಳಬಹುದು. ಈ ದೇಶದ ಕೇಂದ್ರ ಸರಕಾರವನ್ನೇ ಈ ವಿವಾದದ ಕಾರಣದಿಂದಾಗಿ ಪತನಗೊಳಿಸಿದ್ದನ್ನು ಕಂಡಿದ್ದೇವೆ. ಇದು ಜಾತಿ ಮತ ಧರ್ಮ ನಿರಪೇಕ್ಷವಾದ ದೇಶ ಎಂದು ಘೋಷಿಸಿಕೊಂಡಿರುವ ಈ ದೇಶದಲ್ಲಿ ಮತಧರ್ಮಪರವಾದ ವಿವಾದ ಇದಕ್ಕೆ ಕಾರಣವಾಯಿತೆಂಬುದು ನಮಗೆ ಗೌರವ ತರುವಂಥ ಸಂಗತಿಯಲ್ಲ. ವಿ. ಪಿ. ಸಿಂಗ್ ಸರಕಾರ ತಳೆದಿದ್ದ ನಿಲುವು ಕೂಡ ರಾಜಕೀಯ ತಂತ್ರಕ್ಕಾಗಿಯೇ ತಳೆದಿದ್ದಾಗಿತ್ತು ಎಂದು ಬೇಕಾದರೆ ವ್ಯಾಖ್ಯಾನ ಮಾಡೋಣ. ಚಂದ್ರಶೇಖರ ಇನ್ನೊಂದು ರೀತಿ, ರಾಜೀವ ಗಾಂಧಿ ಮತ್ತೊಂದು ರೀತಿ ರಾಜಕೀಯ ತಂತ್ರಕ್ಕಾಗಿ ಆ ಬಗೆಯಲ್ಲಿ ವರ್ತಿಸಿದರೆನ್ನೋಣ. ಕೆಲವರಿಗೆ ಮತ ಧರ್ಮ ಮುಖ್ಯ, ಕೆಲವರಿಗೆ ಮತ (vote) ಮುಖ್ಯ. ಕೆಲವರಿಗೆ ಪಕ್ಷ ಮುಖ್ಯ ಎಲ್ಲ ರಾಜಕಾರಣಿಗಳಿಗೂ, ರಾಜಕೀಯ ಪಕ್ಷಗಳಿಗೂ ಖುರ್ಚಿ ಮುಖ್ಯ. ಮತದ ಮೋಹವೂ ಇಲ್ಲದ, ಖುರ್ಚಿ ರೋಗವೂ ಇಲ್ಲದ ನಮ್ಮ ನಿಮ್ಮಂಥ 'ಪ್ರಜ್ಞಾವಂಥ ನಾಗರಿಕ'ರೆನಿಸಿಕೊಂಡ ಜನಗಳಿಗಾದರೂ ದೇಶ ಮುಖ್ಯವಾಗಬೇಡವೇ ? ಈ ಬಗ್ಗೆ ಗಂಭೀರವಾಗಿ ನಾವು ನೀವು ಎಲ್ಲಾ ಯೋಚಿಸಬೇಕು.

ರಾಮಜನ್ಮ ಭೂಮಿ–ಬಾಬರಿ ಮಸೀದಿಯ ಈ ಸಮಸ್ಯೆ ಮುಗಿಯಿತು ಎಂದ ಮೇಲೆ ಅದು ತಣ್ಣಗಾಗುತ್ತದೆ. ನಮ್ಮ ಜನದ ಮನಸ್ಸು ನಮಗೆ ಗೊತ್ತಿದೆ. ತುರ್ತುಪರಿಸ್ಥಿತಿಯ ಕಾಲದಲ್ಲಾದ ಅವಾಂತರಗಳೇ ನಮ್ಮ ಜನಕ್ಕೆ ಮರೆತು ಹೋದವು. ಜನಕ್ಕೆ ರಾಮ ಭಕ್ತಿಯ ತೀವ್ರತೆ ಅಥವಾ ರಾಮಮಂದಿರದ ಮೇಲಿನ ಭಕ್ತಿಯ ತೀವ್ರತೆ ಹೆಚ್ಚು ಕಾಲ ಉಳಿಯದೇ ಹೊರಟು ಹೋಗುತ್ತದೆ. ಅಥವಾ ಅದರ ಬಲ, ಶ್ರದ್ಧೆ ಕುಂದುತ್ತದೆ. ರಾಮ ಭಕ್ತಿಯಿಂದ ಹೊಟ್ಟೆತುಂಬುವುದಿಲ್ಲ. ನಮ್ಮ ದೇಶದ ಜನ ಸಾಮಾನ್ಯರನ್ನು ಯಾವಾಗಲೂ ಬಾಧಿಸುದ ಆರ್ಥಿಕ ಸಮಸ್ಯೆ ಮುಂದಾಗುದಕ್ಕೆ

ಪ್ರಾರಂಭವಾಗುತ್ತದೆ. ಮಂಡಲ್ ಆಯೋಗದ ವರದಿಯಿಂದ ಅನುಕೂಲ ಯಾರಿಗೆ ಅನನುಕೂಲ ಯಾರಿಗೆ ಎಂಬ ಪ್ರಶ್ನೆ ಎದುರಾಗುತ್ತದೆ. ಅದನ್ನು ಯಾರು ವಿರೋಧಿಸುತ್ತಾರೆ, ಯಾಕೆ ವಿರೋಧಿಸುತ್ತಾರೆ ಎಂಬ ಜಿಜ್ಞಾಸೆ ಪ್ರಾರಂಭವಾಗುತ್ತದೆ. ಆ ಬಗೆಯ ಜಿಜ್ಞಾಸೆ ಈಗಾಗಲೇ ಪ್ರಾರಂಭವಾಗಿಯೂ ಇದೆ. ಹಿಂದೂಗಳೆಲ್ಲ ಒಂದಲ್ಲ ಎಂಬುದನ್ನು, ಎಲ್ಲ ಸಂದರ್ಭಗಳಲ್ಲಿಯೂ ಒಂದಾಗಿಯೇ ಇರುವವರಲ್ಲ ಎಂಬುದನ್ನು ಮಂಡಲ್ ಆಯೋಗದ ವರದಿಗೆ ಸಂಬಂಧಿಸಿದಂತೆ ಉತ್ತರ ಭಾರತದಲ್ಲಿ ನಡೆದ ಭೀಕರ ಚಳವಳಿ ಸ್ಪಷ್ಟವಾಗಿ ನಮಗೆ ತೋರಿಸಿಕೊಟ್ಟಿದೆ. ಇದನ್ನು ನಾವು ಮರೆಯಕೂಡದು. ಆಗ ರಾಮಜನ್ಮಭೂಮಿ ಪರ ವಾದಿಸುವವರು ಮುಸ್ಲಿಮರನ್ನು ಕುರಿತಂತೆ ಚರಿತ್ರೆಯನ್ನು ಕೆದಕಿ ಮಾತನಾಡುತ್ತಾರಲ್ಲಾ ಅವರಂತೆಯೇ ಹಿಂದೂ ಧರ್ಮದೊಳಗೇ ಮಂಡಲ್ ಆಯೋಗದ ವರದಿಯ ಅನುಷ್ಠಾನವನ್ನು ವಿರೋಧಿಸುತ್ತಿರುವ ಜನರ ಜಾತಿ ಮತ್ತು ಚರಿತ್ರೆಯನ್ನು ಕೆದಕುವ ಪ್ರೇರಣೆ, ಹಿಂದುಳಿದ ಜನಸಮೂಹಗಳ ಹಿಂದೂಗಳಲ್ಲಿ ಅಂದರೆ ಮಂಡಲ್ ಆಯೋಗದ ವರದಿಯಿಂದ ಅನುಕೂಲವಾಗುವ ಜನಗಳಲ್ಲಿ ಉಂಟಾದರೆ ಅದರ ಪರಿಣಾಮ ಏನಾದೀತು ? ಮುಸ್ಲಿಮರ ಚರಿತ್ರೆಯನ್ನು ಕೆದಕಿ ಮಾತನಾಡುವವರು ಆ ಕುರಿತು ಗಂಭೀರವಾಗಿ ಆಲೋಚನೆ ಮಾಡಬೇಕು.

ನಮ್ಮ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿಯೂ ಇಷ್ಟು ಅಸಹಿಷ್ಣು ರೀತಿಯಲ್ಲಿ ಅಲ್ಲದಿದ್ದರೂ ಚರಿತ್ರೆಯನ್ನು ಪಾರ್ಶ್ವಿಕವಾಗಿ ಕೆದಕಿ ವ್ಯಾಖ್ಯಾನಿಸುವ, ಚರಿತ್ರೆಯಲ್ಲಿ ಆಗಿಹೋದ ಅವಿವೇಕಗಳಿಗೆ, ಅನ್ಯಾಯಗಳಿಗೆ ಯಾರನ್ನೋ ಹೊಣೆಗಾರರೆಂದು ಗುರುತಿಸಿ ಛೇಡಿಸುವ ಧೋರಣೆ ಕೆಲಕಾಲ ಬೆಳೆದದ್ದುಂಟು.

೧೯೭೦ರನೇ ಇಸವಿಯಲ್ಲಿ ಕೆಲವು ಬ್ರಾಹ್ಮಣೇತರ ಲೇಖಕರು, ಕಲಾವಿದರು ಸೇರಿಕೊಂಡು ಬರಹಗಾರರ ಒಕ್ಕೂಟವನ್ನು ಪ್ರಾರಂಭಿಸಿದರು. ಪುರೋಹಿತಶಾಹಿಯನ್ನು ಅಂದರೆ ಮುಖ್ಯವಾಗಿ ಬ್ರಾಹ್ಮಣ ಸಂಸ್ಕೃತಿ, ಬ್ರಾಹ್ಮಣರ ಚರಿತ್ರೆ ಇವುಗಳನ್ನು ಪ್ರಶ್ನಿಸುವಂಥದಾಗಿತ್ತು ಆ ಒಕ್ಕೂಟ. ಇದೇ ಮೈಸೂರಿನಲ್ಲಿ ನಡೆದ ಒಕ್ಕೂಟದ ಸಮ್ಮೇಳನದಲ್ಲಿ ಮಾಡಿದ ಉಪನ್ಯಾಸಗಳಲ್ಲಿ ಪುರೋಹಿತಶಾಹಿ ಅಂದರೆ ಮುಖ್ಯವಾಗಿ ಬ್ರಾಹ್ಮಣರನ್ನು ಕುರಿತ ಅಸಹನೆ, ಸಿಟ್ಟು ಕಾಣುತ್ತಿತ್ತು. ಮುಂದೆಯೂ ಕೆಲವು ಸಾಹಿತಿಗಳು ಆ ಗುಂಗಿನಲ್ಲಿಯೇ ಇದ್ದರು. ಮುಂದೆ ಕೆಲವು ಕಾಲ ಶೂದ್ರ ಸಾಹಿತ್ಯ ಚಳವಳಿ ಎಂದೂ ಅದನ್ನು ಕರೆಯಲಾಗುತ್ತಿತ್ತು.

ನಾನು ಹುಟ್ಟಿನಿಂದ ಬ್ರಾಹ್ಮಣೇತರ ಲೇಖಕನಾಗಿದ್ದರೂ ಬರಹಗಾರರ ಒಕ್ಕೂಟದೊಂದಿಗೆ ನನ್ನನ್ನು ಗುರುತಿಸಿಕೊಂಡಿರಲಿಲ್ಲ. ಹಾಗೆಂದು ನಾನೇನು ಪುರೋಹಿತಶಾಹಿ

ಯನ್ನು, ಅದರ ಚರಿತ್ರೆಯನ್ನು ಸಮರ್ಥಿಸುವವನಾಗಿರಲಿಲ್ಲ. ಇಂದಿಗೂ ಸಮರ್ಥಿಸುವವನಲ್ಲ. ಬ್ರಾಹ್ಮಣರ ಚರಿತ್ರೆಯನ್ನೇ ಪ್ರತ್ಯೇಕವಾಗಿ ಕೆದಕುವುದೆಂದರೆ ಸತ್ತದ್ದನ್ನು ಹೂತದ್ದನ್ನು ಹೊರಗೆ ತೆಗೆದು ಮಹಜರು ಮಾಡಿದಂತೆ. ಅದಕ್ಕೆ ಪ್ರಾರಂಭಿಸಿದರೆ ಯಾದ ಯಾರ ಕಡೆಯೂ ವಾಸನೆ ಹೊಡೆಯುತ್ತದೆ; ಬರೀ ಬ್ರಾಹ್ಮಣರ ಕಡೆ ಅಲ್ಲ. ಬ್ರಾಹ್ಮಣರು ಭೂಮಾಲಿಕ ಮಧ್ಯಮ ಜಾತಿಯವರನ್ನೂ ಇತರ ಕೆಳಜಾತಿಯವರನ್ನೂ ಧರ್ಮದ ಹೆಸರಿನಲ್ಲಿ ಶೋಷಿಸಿರಬಹುದು; ಶೋಷಿಸಿದ್ದಾರೆ. ಭೂಮಾಲಿಕ ಮಧ್ಯಮ ಜಾತಿಯವರು ಆರ್ಥಿಕವಾಗಿ, ದೈಹಿಕವಾಗಿ ದಲಿತರ ಮೇಲೆ ದಬ್ಬಾಳಿಕೆ ನಡೆಸಿಲ್ಲವೆ ? ಅವರನ್ನು ಶೋಷಿಸಿಲ್ಲವೆ ? ಜೀತದಾಳುಗಳನ್ನಾಗಿ ಇಟ್ಟುಕೊಂಡಿಲ್ಲವೆ ? ಇಂಥ ಪ್ರಶ್ನೆಗಳನ್ನು ಎತ್ತುತ್ತಾ ಹೋದರೆ ಈ ಶೋಷಣೆಯ ಆರೋಪ ದಲಿತರಲ್ಲಿಯ ಎಡ-ಬಲದವರೆಗೂ ಬರುತ್ತದೆ. ಈ ದೇಶದ ಹಿಂದೂ ಧರ್ಮದ ಶ್ರೇಣೀಕೃತ ದುಷ್ಟ ಜಾತಿ ವ್ಯವಸ್ಥೆಯು ಸಮಾಜದಲ್ಲಿ ಶೋಷಿಸುವುದಕ್ಕೆ ಮೇಲಿನ ಜಾತಿಯವರಿಗೆ ಶೇ. ೬೦ ಅನುಕೂಲ ಇರಬಹುದು; ಇನ್ನೊಂದು ಜಾತಿಯವರಿಗೆ ಶೇ ೪೦ ಅನುಕೂಲ ಇರಬಹುದು. ಎಡಬಲದವರಲ್ಲಿಯೂ ಒಂದು ಪಂಗಡದವರಿಗೆ ಶೋಷಣೆ ಮಾಡುವುದಕ್ಕೆ ಶೇ, ೫ ಅನುಕೂಲ ಇರಬಹುದು. ಎಲ್ಲ ಜಾತಿಯವರೂ ತಮಗೆ ಅವಕಾಶ ಇರುವಷ್ಟು–ಕೆಲವೊಮ್ಮೆ ಅದಕ್ಕಿಂತ ಹೆಚ್ಚು–ಶೋಷಣೆ ಮಾಡಿದವರೇ; ಮಾಡುತ್ತ ಬಂದಿರುವವರೇ. ಒಬ್ಬ ಆನೆ ಕದಿಯುವವನು, ಇನ್ನೊಬ್ಬ ಅಡಿಕೆ ಕದಿಯುವವನು. ಅಷ್ಟೇ ವ್ಯತ್ಯಾಸ. ಈ ಸತ್ಯ ನಮಗೆ ಗೊತ್ತಿರುವಾಗ ಶೋಷಣೆ ಮಾಡಿದವರು ಬ್ರಾಹ್ಮಣರು ಮಾತ್ರ, ಅವರು ಮಾತ್ರ ಅಪರಾಧಿಗಳು ಅನ್ನುವಂಥ ರೀತಿಯಲ್ಲಿ ಚರಿತ್ರೆಯನ್ನು ವ್ಯಾಖ್ಯಾನಿಸಿದರೆ ಎಳೆಯ ತಲೆಮಾರಿನವರಿಗೆ ಸಮಂಜಸವಾದ ರೀತಿಯಲ್ಲಿ ಚರಿತ್ರೆಯನ್ನು ನಾವು ತಿಳಿಸಿದಂತೆ ಆಗುವುದಿಲ್ಲ. ನಮ್ಮ ದೇಶದ ಚರಿತ್ರೆ ಇಷ್ಟು ಸರಳ ವ್ಯಾಖ್ಯಾನಕ್ಕೆ, ಏಕಮುಖವಾದ ವ್ಯಾಖ್ಯಾನಕ್ಕೆ, ಪಾರ್ಶ್ವಿಕ ವ್ಯಾಖ್ಯಾನಕ್ಕೆ ದಕ್ಕುವಂಥದಲ್ಲ; ಅದು ತುಂಬ ಸಂಕೀರ್ಣವಾದದ್ದು. ಒಂದು ಜಾತಿಯವರನ್ನು ಮಾತ್ರ ಅಪರಾಧಿಗಳೆಂದು ಗುರುತಿಸಿ ವಿಚಾರಣೆಗೆ ಗುರಿಪಡಿಸುವ ರಭಸಮತಿತ್ವವನ್ನು ಬಿಟ್ಟು ಹಿಂದೂ ಧರ್ಮ ಕಟ್ಟಿದ ವ್ಯವಸ್ಥೆಯನ್ನೇ, ಈ ದೇಶದ ಚರಿತ್ರೆಯನ್ನೇ ಇಡಿಯಾಗಿ ಗಂಭೀರವಾದ ಮರು ವಿಮರ್ಶೆಗೆ ಒಳಪಡಿಸುವುದು ಅಗತ್ಯ. ಹೆಂಗಸರಿಗೆ ಹಿಂದೂ ಧರ್ಮದ ಚರಿತ್ರೆಯಲ್ಲಿ ಆದ ಅನ್ಯಾಯವನ್ನು ಅವರಿಗೆ ಸಂಬಂಧಿಸಿದಂತೆ ಆದ ಮತ್ತು ಆಗುತ್ತಿರುವ ಶೋಷಣೆಯನ್ನು ಸಂಪೂರ್ಣವಾಗಿ ಯಾವುದೋ ಒಂದು ಜಾತಿಗೆ ಮಾತ್ರ ಸೀಮಿತಗೊಳಿಸಿ ವ್ಯಾಖ್ಯಾನಿಸಬಹುದೇ–ಈ ಬಗೆಯ ವಿಚಾರ ಸರಣಿ ನನ್ನದಾಗಿತ್ತು.

ಇಂಥ ಮಾತುಗಳನ್ನು ನಾನು ಹೇಳಿದಾಗ ಒಕ್ಕೂಟದ ಬಗ್ಗೆ ಉತ್ಸಾಹಿಗಳಾಗಿದ್ದ ನನ್ನ ಕೆಲವು ಸಾಹಿತಿ ಸ್ನೇಹಿತರಿಗೆ ಸಮಾಧಾನವಾಗಲಿಲ್ಲ; ನಾನು ಹುಟ್ಟಿನಿಂದ

ಬ್ರಾಹ್ಮಣನಲ್ಲದಿದ್ದರೂ ನವ್ಯ ಸಾಹಿತ್ಯದ ಕಡೆಗೆ ಒಲಿದಿರುವವನು. ಹುಟ್ಟಿನಿಂದ ಬ್ರಾಹ್ಮಣರಾದ ಗೋಪಾಲಕೃಷ್ಣ ಅಡಿಗ, ಯು. ಆರ್. ಅನಂತಮೂರ್ತಿ ಇಂಥವರ ಸಾಹಿತ್ಯದ ಕಡೆ ಒಲವಿರುವವನು. ಆದ್ದರಿಂದ ಇಂಥ ಮಾತುಗಳನ್ನು ಆಡುತ್ತಿರ ಬಹುದು ಅಂತ ಅವರಿಗೆ ಅನ್ನಿಸಿರಬಹುದು. ಹಾಗೆ ಯಾರು ಯಾರೋ ನನ್ನ ಹಿಂದೆ ಆಡಿಕೊಂಡರೆಂಬುದನ್ನೂ ನಾನು ಕೇಳಿದ್ದುಂಟು. ಆದರೆ ಮುಂದೆ ಐದೇ ಐದು ವರ್ಷದೊಳಗೆ ಅಂದರೆ ೧೯೭೯ ರಲ್ಲಿ 'ಬಂಡಾಯ ಸಾಹಿತ್ಯ ಸಂಘಟನೆ' ಆದಾಗ ಮಾರ್ಕ್ಸ್‌ವಾದಿ ಸಾಹಿತಿಗಳ ಜೊತೆಗೆ ದಲಿತ ಸಾಹಿತಿಗಳೂ ಸೇರಿಕೊಂಡರು. ಬ್ರಾಹ್ಮಣರು ಮಾತ್ರವಲ್ಲ ಭೂಮಾಲಿಕ ಸವರ್ಣೀಯ ಜಾತಿಗೆ ಸೇರಿದವರೂ ಶೋಷ ಕರೇ ಎಂದು ಅವರು ದನಿ ಎತ್ತಿದರು. ಒಕ್ಕೂಟದವರು ಪುರೋಹಿತಶಾಹಿ ವಿರುದ್ಧ ಎತ್ತಿದ ತರ್ಕ, ಚರಿತ್ರೆಯ ಮಹಜರು ಮಾಡಿದ ರೀತಿ ಇವು ಭೂಮಾಲಿಕ ಜಾತಿ ಯವರ ವರೆಗೂ ವಿಸ್ತರಿಸಿದ್ದರ ಪರಿಣಾಮ ಇದು. ಈಗ ಅದು ಚರಿತ್ರೆಯ ಭಾಗ. ಚರಿತ್ರೆಯನ್ನು ವ್ಯಾಖ್ಯಾನಿಸುವಾಗ ದುಡುಕಿದರೆ ಏಕಪಕ್ಷೀಯವಾದ. ಪಾರ್ಶ್ವಿಕವಾದ ನೋಟದ ಮೇಲೆ ಹೆಚ್ಚಿನ ಒತ್ತು ಬಿದ್ದದ್ದಾದರೆ ಆ ಬಗೆಯ ವ್ಯಾಖ್ಯಾನವನ್ನು ಹುಟ್ಟು ಹಾಕಿದವರ ವಿರುದ್ಧವೂ ಅದು ತಿರುಗಬಹುದು ಎಂಬ ಒಂದು ಸಂಗತಿಯ ಕಡೆ ರಾಮಜನ್ಮಭೂಮಿ ಪರ ವಾದಿಗಳ ಗಮನ ಸೆಳೆಯುವದಕ್ಕಾಗಿ ಮಾತ್ರ ಬರಹ ಗಾರರ ಒಕ್ಕೂಟದ ಬಗ್ಗೆ ಪ್ರಸ್ತಾಪಮಾಡಿದೆ.

ಬಂಡಾಯ ಸಾಹಿತ್ಯದ ರಾಜ್ಯಮಟ್ಟದ ದಶಮಾನೋತ್ಸವ ಸಮ್ಮೇಳನ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ನಡೆದಾಗ ಉದ್ಘಾಟನಾ ಸಮಾರಂಭದ ಮುಖ್ಯ ಅತಿಥಿಯಾಗಿ ನನ್ನನ್ನು ಕರೆದಿದ್ದರು. ಆ ಭಾಷಣದಲ್ಲಿ ಈ ಕೆಲವು ಮಾತು ಗಳನ್ನು ಹೇಳಿದೆ: ನೀವು ಚರಿತ್ರೆಯ ಮಾತನ್ನು ಆಡುತ್ತೀರಿ, ಆ ಚರಿತ್ರೆಯಲ್ಲಿ ಶೋಷಣೆಗೆ ಒಳಗಾದ ಜನಸಮೂಹದವರ ಪರವಾಗಿ ಮಾತನಾಡುತ್ತೀರಿ. ಶೋಷಿತರ ಪರ ಮಾತ್ರ ಆಗಿದ್ದರೆ ನೀವು ಜನಪರ ಹೇಗೆ ಆಗುತ್ತೀರಿ; ಶೋಷಿತರ ಪರ ಎಂದಷ್ಟೇ ಹೇಳಿ, ಪರವಾಗಿಲ್ಲ. ಶೋಷಿತರಷ್ಟೇ ಜನವಲ್ಲವಲ್ಲಾ ! ಶೋಷಣೆ ಮಾಡುವವರೂ ಜನರೇ ಅಲ್ಲವೇ ? ಹಿಂದೆ ಒಂದು ಜಾತಿಯವರೊ ವರ್ಗದವರೊ ನಮ್ಮನ್ನು ಶೊಷಣೆ ಮಾಡಿದರು; ಆದ್ದರಿಂದ ಇಂದು ನಾವು ಅವರನ್ನು ಶೋಷಿಸುತ್ತೇವೆ. ಹಿಂದೆ ಅವರು ನಮ್ಮವರನ್ನು ಶೋಷಣೆ ಮಾಡಿದಾಗ ನಮ್ಮವರು ಯಾವ ಪಾಡು, ಹಿಂಸೆ, ಕ್ರೌರ್ಯ. ಅವಮಾನ ಅನುಭವಿಸಿದರೊ ಅದನ್ನು ಇಂದು ಅವರು ಅನುಭವಿಸುವ ಹಾಗೆ ನಾವು ಮಾಡುತ್ತೇವೆ ಎನ್ನುವಂಥ ಹಿಂಸಾರತಿ (Sadism) ನಿಮ್ಮಲ್ಲಿದ್ದರೆ ನೀವು ಜನಪರವೂ ಆಗುವುದಿಲ್ಲ; ಸಾಮಾಜಿಕ ನ್ಯಾಯದ ಪರವೂ ಆಗುವುದಿಲ್ಲ. ನೀವೂ 'ಅರ್ಧಜನಪರ' ಆಗುತ್ತೀರಿ. ನಿಮ್ಮದು ಪಂಗಡ ಧೋರಣೆ (Factional

attitude) ಆಗುತ್ತದೆ. ಯಾವ ಚರಿತ್ರೆ ಕೆಟ್ಟದಾಗಿತ್ತು, ಮಾನವ ವಿರೋಧಿಯಾಗಿತ್ತು ಎಂದು ಹೇಳುತ್ತೀರೋ ಅಂಥದೇ ಅಮಾನವೀಯ ಚರಿತ್ರೆಯನ್ನು ಪರೋಕ್ಷವಾಗಿ ನೀವೂ ನಿರ್ಮಿಸುವುದಕ್ಕೆ ಹೊರಟಂತಾಗುವುದಿಲ್ಲವೇ ? ಇಂದಿನ ನಮ್ಮ ನಿಮ್ಮ ನಡೆವಳಿಕೆ, ಕಾರ್ಯಗಳೇ ನಾಳಿನವರಿಗೆ ಚರಿತ್ರೆ ಅನಿಸಿಕೊಳ್ಳುತ್ತದೆಯಲ್ಲವೇ ?

ಈ ವರೆಗೆ ಜಾತಿಬಲ, ಸ್ಥಾನಬಲ, ಧನಬಲ ಉಳ್ಳ ಜನ ಸಮೂಹಕ್ಕೆ ಸೇರಿದಂಥವರೆಲ್ಲ. ಈ ವರೆಗೆ ಆ ಬಲಗಳೊಂದೂ ಇಲ್ಲದ ಕಾರಣದಿಂದಾಗಿ ಕೀಳೆನಿಸಿಕೊಂಡಿದ್ದವರು ಇಂದು ಸ್ವಾತಂತ್ರ್ಯಕ್ಕಾಗಿ, ಸಮಾನತೆಗಾಗಿ, ಸಾಮಾಜಿಕ ನ್ಯಾಯಕ್ಕಾಗಿ ಹಾತೊರೆಯುತ್ತಿರುವುದನ್ನು, ಹೋರಾಡುತ್ತಿರುವುದನ್ನು, ಸಹಾನುಭೂತಿಯಿಂದ ಅರ್ಥಮಾಡಿಕೊಳ್ಳಬೇಕು; ಹೆಚ್ಚು ಮಾನವೀಯ ಸಹಾನುಭೂತಿಯಿಂದ ಕಾಣಬೇಕು. ಹಾಗೆ ಕಂಡು ಹೊಂದಿಕೊಳ್ಳುವ, ಸಹಿಸುವ, ಬಿಟ್ಟುಕೊಡುವ ಮನೋಭಾವ ತೋರಿಸಬೇಕು. ಪ್ರಜ್ಞಾವಂತರೆಲ್ಲ ಈ ಮಾತನ್ನು ಒಪ್ಪುತ್ತಾರೆ. ಸಮಾನತೆಗಾಗಿ ಹಾತೊರೆಯುತ್ತಿರುವವರು ಅದು ತಮ್ಮ ಹಕ್ಕು ಎಂದು ಸ್ಥಾಪಿಸುವುದು ಸಹಜ ಮತ್ತು ಅಗತ್ಯ. ಆದರೂ ಹಿಂದೆ ಜಾತಿಬಲ, ಸ್ಥಾನಬಲ, ಧನಬಲ ಇದ್ದವರ ಮೇಲೆ ಸೇಡು ತೀರಿಸಿಕೊಳ್ಳುವ ಮನೋಭಾವ ತೋರಿಸಬಾರದು. ತಮಗಿರುವ ಅನುಕೂಲಗಳನ್ನು ಇಂದು ಬಿಟ್ಟುಕೊಡಬೇಕಾಗಿ ಬಂದಿರುವಂಥವರಿಗೆ ಆ ಕಾರಣದಿಂದಾಗಿ ಉಂಟಾಗುತ್ತಿರುವ ಯಾತನೆ, ಒಳತೋಟಿ, ಸಂಕಟಗಳನ್ನೂ ಅರ್ಥಮಾಡಿಕೊಳ್ಳುವ ಹೃದಯವಂತಿಕೆಯನ್ನೂ ತೋರಿಸಬೇಕು. ಹೀಗೆ ಪರಸ್ಪರರಲ್ಲಿ ಮಾನವೀಯ ಸಂಬಂಧದ ಬಗ್ಗೆ ಗೌರವ ಬೆಳೆಯುವಂಥ ವಾತಾವರಣವನ್ನು ನಿರ್ಮಿಸುವದಕ್ಕೆ ಅಗತ್ಯವಾದ ರೀತಿಯಲ್ಲಿ ಸಾಹಿತ್ಯದ ಸೃಷ್ಟಿಯಾಗಬೇಕು. ಹಾಗೆಂದು ಸ್ವಾತಂತ್ರ್ಯ, ಸಮಾನತೆ, ಸಾಮಾಜಿಕ ನ್ಯಾಯ ಇಂಥ ಮೌಲ್ಯಗಳ ಬಗ್ಗೆ ಇರುವ ನಿಷ್ಠೆಯನ್ನು ಬಿಟ್ಟುಕೊಡಬೇಕಾಗಿಲ್ಲ; ಆ ಮೌಲ್ಯಗಳ ಸ್ಥಾಪನೆಗಾಗಿ ಹೋರಾಡುವ ಛಲ ಮತ್ತು ಸಂಕಲ್ಪವನ್ನು ಬಿಟ್ಟುಕೊಡಬೇಕಾಗಿಲ್ಲ. ಹೋರಾಟದ ತೀವ್ರತೆಯೂ ಕಡಿಮೆಯಾಗಬೇಕಾದ್ದಿಲ್ಲ. ಆದರೆ ಹಿಂಸಾರತಿಯ ಮನೋಭಾವವನ್ನು, ಸೇಡಿನ ಮನೋಭಾವವನ್ನು ಬಿಟ್ಟುಬಿಡಬೇಕು. ರಾಷ್ಟ್ರ ಜೀವನದ ಬದಲಾವಣೆಯ ಪ್ರಕ್ರಿಯೆಯಲ್ಲಿ ಇಂದು ಅನಿವಾರ್ಯವಾಗಿ ನೋವುಣ್ಣಬೇಕಾಗಿ ಬಂದಿರುವವರ ಪೇಚು, ಬಿಕ್ಕಟ್ಟು, ಸಂಕಟ ಇವುಗಳ ಬಗ್ಗೆಯೂ ಅಂತಃಕರಣವನ್ನು ಆರ್ದ್ರವಾಗಿ ಇಟ್ಟುಕೊಳ್ಳುವಂಥ, ಸಂವೇದನಾ ಸಂಸ್ಕಾರವನ್ನು ಉಳಿಸುವಂಥ ಸಾಹಿತ್ಯವನ್ನು ಸೃಷ್ಟಿಸಬೇಕು. ಆಗ ನೀವು ನಿಜವಾಗಿ 'ಜನಪರ' ಆಗುತ್ತೀರಿ---ಎಂದು ಮುಂತಾಗಿ ಆ ನನ್ನ ಭಾಷಣದಲ್ಲಿ ಹೇಳಿದ್ದೆ, ಈಗಲೂ ನನ್ನ ಅಭಿಪ್ರಾಯ ಅದೇ. ರಾಮಜನ್ಮಭೂಮಿ-ಬಾಬರಿ ಮಸೀದಿ

ವಿವಾದದ ಈ ಸಂದರ್ಭದಲ್ಲಿಯೂ ಮಾನವೀಯ ಸಂಬಂಧಗಳ ಬಗ್ಗೆ ನಾನು ಯೋಚಿಸುವ ರೀತಿ ಆ ಬಗೆಯದೇ.

ರಾಮಜನ್ಮಭೂಮಿಯ ನೆಪದಲ್ಲಿ, ರಾಮಮಂದಿರ ನೆಪದಲ್ಲಿ ಮುಸ್ಲಿಮರ ಚರಿತ್ರೆಯನ್ನು ಕೆದಕಬಾರದು. ಹಾಗೆ ಕೆದಕಿ ಅದರಿಂದ ಪಡೆಯಬಹುದಾದ ರಾಜಕೀಯ ಲಾಭ ಮುಖ್ಯವಾಗಬಾರದು. ರಾಮಜನ್ಮಭೂಮಿಪರ ವಾದಿಗಳು ಹಿಂದೂಪರ ದೃಷ್ಟಿಯನ್ನು ರಾಷ್ಟ್ರಕ್ಷೇಮ, ರಾಷ್ಟ್ರಪ್ರೇಮದ ಜೊತೆ ತಳಕು ಹಾಕಿ ಮಾತನಾಡುತ್ತಾರೆ. ಅದು ಸರಿಯಾದ ಧೋರಣೆಯಲ್ಲ. ಇಡೀ ರಾಷ್ಟ್ರದ ಕ್ಷೇಮ, ರಾಷ್ಟ್ರಪ್ರೇಮ ಮುಖ್ಯವಾಗಬೇಕು. ನಿಜವಾದ ರಾಷ್ಟ್ರಪ್ರೇಮಿಯಾದವರಿಗೆ, ರಾಷ್ಟ್ರದ ಕ್ಷೇಮವನ್ನು ನಿಜವಾಗಿ ಬಯಸುತ್ತೇವೆಂಬವರಿಗೆ ಹಿಂದುಗಳ ಪರವೆಂದೊ, ಮುಸ್ಲಿಮರ ಪರವೆಂದೂ ಹೇಳಿಕೊಳ್ಳುವುದು ಸಾಧ್ಯವಾಗಲಾರದು. ರಾಷ್ಟ್ರ ಎಂದರೆ ಒಂದು ಭೌಗೋಲಿಕ ವ್ಯಾಪ್ತಿಯ ಭೂಭಾಗ ಮಾತ್ರವಲ್ಲ, ಅದರ ನದಿನದಗಳಲ್ಲ, ಕಾಡುಮೇಡುಗಳಲ್ಲ, ಗುಡ್ಡ ಬೆಟ್ಟಗಳಲ್ಲ. ಅವೂ ಇವೆ ನಿಜ. ಆದರೆ ರಾಷ್ಟ್ರವೆಂದರೆ ಮುಖ್ಯವಾಗಿ ರಾಷ್ಟ್ರದ ಜನ ರಾಷ್ಟ್ರ ಕ್ಷೇಮವೆಂದರೆ ರಾಷ್ಟ್ರದಲ್ಲಿರುವ ಎಲ್ಲ ಜನರ ಕ್ಷೇಮ, ರಾಷ್ಟ್ರ ಪ್ರೇಮವೆಂದರೆ ರಾಷ್ಟ್ರದಲ್ಲಿ ಇರುವವರೆಲ್ಲರ ಬಗ್ಗೆ ಇರುವ ಪ್ರೇಮ. **ಕೇವಲ** ಹಿಂದೂಗಳ ಪರ ಯೋಚಿಸುವವರು, **ಕೇವಲ** ಹಿಂದುಗಳ ಬಗ್ಗೆ ಪ್ರೇಮ ತೋರಿಸುವವರು ರಾಷ್ಟ್ರ ಕ್ಷೇಮದ ಬಗ್ಗೆ ನಿಜವಾದ ಕಾಳಜಿ ಇರುವವರೆಂದು, ರಾಷ್ಟ್ರದ ಬಗ್ಗೆ ನಿಜವಾದ ಪ್ರೇಮ ಇರುವವರೆಂದು ನಂಬುವುದು ಕಷ್ಟ. ಅಂಥವರು 'ಅರ್ಧ ರಾಷ್ಟ್ರೀಯ'ವಾದಿಗಳು ಅಷ್ಟೆ. **ಕೇವಲ** ಮುಸ್ಲಿಮರ ಕ್ಷೇಮದ ಪರ ಯೋಚಿಸುವವರಿಗೂ, **ಕೇವಲ** ಮುಸ್ಲಿಮರ ಬಗ್ಗೆ ಪ್ರೇಮ ತೋರಿಸುವವರಿಗೂ ಈ ಮಾತು ಅನ್ವಯಿಸುತ್ತದೆ.

ರಾಮಜನ್ಮಭೂಮಿಪರ ಹೋರಾಡುತ್ತಿರುವ ರಾಜಕೀಯ ಪಕ್ಷಗಳು ಮತ್ತು ಸಂಘಟನೆಗಳು ಹಿಂದೂ ಧರ್ಮದ ಹೆಸರಿನಲ್ಲಿ ಹಿಂದೂ ಪುರೋಹಿತಶಾಹಿಯ ಹಿತಾಸಕ್ತಿಗಳನ್ನು ಮುಖ್ಯವಾಗಿ ಕಾಯ್ದುಕೊಳ್ಳುವ ಉದ್ದೇಶ ಉಳ್ಳವೆಂಬ ಭಾವನೆ ಹಿಂದೂಗಳಲ್ಲಿಯೆ ಹಿಂದುಳಿದ ಜನಸಮುದಾಯದವರ ಮನಸ್ಸಿನಲ್ಲಿ ಇದೆ. ಎಲ್ಲ ಕಡೆಗಳಲ್ಲಿ ಈ ಬಗ್ಗೆ ಮಾತನಾಡುತ್ತಾರೆ. ಖಾಸಗಿ ಮಾತು, ಚರ್ಚೆಗಳಲ್ಲಿಯಂತೂ ನಿರ್ಭಿಡೆಯಿಂದ ಈ ಬಗ್ಗೆ ಮಾತನಾಡುತ್ತಾರೆ. ಚರಿತ್ರೆಯಲ್ಲಿ ಪುರೋಹಿತಶಾಹಿ ಜಾತಿಗಳವರು ಮಾಡಿದ್ದೇನು ಎಂಬ ಪ್ರಶ್ನೆ ಅವರಲ್ಲಿ ಸಾರ್ವತ್ರಿಕವಾಗಿ ಎದ್ದರೆ, ಅವರು ಅದನ್ನು ಕೆದಕುವುದಕ್ಕೆ ಸುರುಮಾಡಿದರೆ, ಅದರ ಪರಿಣಾಮ ಏನಾದೀತು ?— ಎಂಬಂಥ ಪ್ರಶ್ನೆಗಳನ್ನು ಮುಸ್ಲಿಮರ ಚರಿತ್ರೆಯನ್ನು ಕೆದಕಿ ಮಾತನಾಡುತ್ತಿರುವವರು ಕೇಳಿಕೊಳ್ಳಬೇಕು.

ಒಟ್ಟಿನಲ್ಲಿ ಅಭಿಪ್ರಾಯವಿಷ್ಟೆ: ಚರಿತ್ರೆಯಲ್ಲಿ ಆಗಿಹೋದ ವಿವೇಕ, ಅವಿವೇಕಗಳನ್ನು ಗುರುತಿಸಿ ಈ ಕಾಲದ ನಮ್ಮ ತಿಳಿವಿಗೆ, ಮಾನವೀಯ ಸಹಬಾಳ್ವೆಯ ಆದರ್ಶಕ್ಕೆ ಹೊಂದುವಂತೆ ಆ ಅವಿವೇಕಗಳನ್ನು ಬಿಟ್ಟುಬಿಡುವ ಮತ್ತು ವಿವೇಕವನ್ನು ಉಳಿಸಿ ಕೊಳ್ಳುವ ಕಾರಣಕ್ಕಾಗಿ ಚರಿತ್ರೆಯ ಅಭ್ಯಾಸ ಮಾಡಬೇಕು. ಚರಿತ್ರೆಯ ವ್ಯಾಖ್ಯಾನ ಮಾಡಬೇಕು. ಅದನ್ನು ಬಿಟ್ಟು ಚರಿತ್ರೆಯನ್ನು ಓದುವುದು ಚರಿತ್ರೆಯಲ್ಲಿ ಯಾರಿಂದಲೋ ಆಗಿಹೋದ ಅವಿವೇಕಕ್ಕೆ ಅವರ ಪೀಳಿಗೆಯವರ ಮೇಲೆ ಅಸಹನೆಯನ್ನು ಬೆಳೆಸುವುದಕ್ಕೆ ಅಲ್ಲ; ಸೇಡು ತೀರಿಸಿಕೊಳ್ಳುವುದಕ್ಕೆ ಅಲ್ಲ; ಅಂಥ ಅವಿವೇಕವನ್ನು ತಿರುಗಿ ಮಾಡುವುದಕ್ಕೆ ಅಲ್ಲ. ಚರಿತ್ರೆಯ ಬಗ್ಗೆ ಮಾತನಾಡುವಾಗ, ಅದನ್ನು ವ್ಯಾಖ್ಯಾನಿಸಿಕೊಳ್ಳುವಾಗ ಈ ಅರಿವು, ಈ ವಿವೇಕ ಇರಬೇಕಾಗುತ್ತದೆ. ಆಗಿಹೋದ ಘಟನಾವಳಿಗಳನ್ನು ಕುರಿತ ಮಾಹಿತಿ ಸಂಗ್ರಹಿಸುವುದಕ್ಕಾಗಿಯೂ ಚರಿತ್ರೆಯನ್ನು ಓದುವುದಲ್ಲ; ಆ ಘಟನಾವಳಿಗಳ ಕಾರಣದಿಂದಾಗಿ ಆ ಕಾಲದ ಮತ್ತು ಮುಂದಿನ ಜನಜೀವನದ ಮೇಲಾದ ಪರಿಣಾಮ—ಉಂಟಾದ ನೋವು ನಲಿವು, ಸುಖ-ದುಃಖ ಇವುಗಳನ್ನು ಕುರಿತ ಅನುಭವದಿಂದ ಇಂದಿನ ನಾವು ನಮ್ಮ ಮುಂದಿನ ಪೀಳಿಗೆಯವರು ನೆಮ್ಮದಿಯಿಂದ ಬಾಳುವ ದಾರಿಯನ್ನು ಕಂಡುಕೊಳ್ಳುವುದಕ್ಕಾಗಿ ಓದಬೇಕು. ಇದನ್ನು ಯಾರೂ ಮರೆಯಬಾರದು.

ಈ ವರೆಗೆ ನನ್ನ ಅಭಿಪ್ರಾಯಗಳನ್ನು ನಿಮ್ಮ ಮುಂದೆ ಇಟ್ಟಿದ್ದೇನೆ. ಅವುಗಳನ್ನು ಕುರಿತು ತಾಳ್ಮೆಯಿಂದ, ಭಾವಾವೇಶಕ್ಕೆ ಅವಕಾಶ ಕೊಡದೆ ಆಲೋಚನೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ●

ಸೌಜನ್ಯ: **ಸಮನ್ವಯ**, ಅಕ್ಟೋಬರ ೧೯೯೨

# ವೆಂಕಟಪತಿಯ ಸಂಕಟ ಪ್ರಸಂಗ

## ಬಸವರಾಜ ಸಾದರ

ಬೆಳಗಿನ ಐದೂವರೆ ಗಂಟೆಗೇನೇ ವೆಂಕಟಪತಿಯ ಗೇಟಿನೊಳಗೆ ದಿನಪತ್ರಿಕೆ ಬಂದು ಬೀಳುತ್ತದೆ. ಅದರ ಪರ್—ಪಟ್ ಶಬ್ದವೇ ವಾರ್ನಿಂಗ್ ಅಲಾರ್ಮ ಆತನಿಗೆ. ಪೇಪರ್ ಬಿದ್ದ ಸಪ್ಪಳ ಕೇಳಿದ ತಕ್ಷಣವೇ ವೆಂಕಟಪತಿ ಚಟಕ್ಕನೆ ಹಾಸಿಗೆಯಿಂದ ಏಳುತ್ತಾನೆ. ಯಾರ ಮುಖವನ್ನೂ ನೋಡದ ಹಾಗೆ ಕಳ್ಳರಂತೆ ಮೆಲ್ಲಗೆ ಗೇಟಿನ ಹತ್ತಿರ ಬರುತ್ತಾನೆ. ಅವಸರವಸರದಿಂದ ಪೇಪರ್ ಕೈಗೆತ್ತಿಕೊಂಡು ಆತ ಮೊದಲು ನೋಡುವುದು ದಿನಭವಿಷ್ಯದ ಕಾಲಂಅನ್ನು. ಅದನ್ನು ನೋಡಿದ ನಂತರವೇ ಆತನ ದಿನನಿತ್ಯದ ಚಟುವಟಿಕೆಗಳು ಆರಂಭವಾಗುವುದು, ಅಲ್ಲ; ಅದರಲ್ಲಿದ್ದ ದಿನಭವಿಷ್ಯವೇ ಆತನ ದಿನದ ಚಟುವಟಿಕೆಗಳನ್ನು ಆರಂಭಿಸುತ್ತಿದ್ದದ್ದು. ಅದು ಹೇಗಂತೀರಾ ?—ದಿನಭವಿಷ್ಯ ನೋಡಿದ ನಂತರ ಆತ ವರ್ತಿಸುತ್ತಿದ್ದ ರೀತಿಯನ್ನು ಗಮನಿಸಿದರೆ ನಿಮಗೂ ಖಾತ್ರಿ ಆಗ್ತದೆ. ಉದಾಹರಣೆಗೆ—'ದೇಹಾಲಸ್ಯ—ನಿದ್ರೆ' ಎಂದು ಭವಿಷ್ಯವಿದ್ದ ದಿನ ಆತ ಅದನ್ನು ನೋಡಿ ಮರಳಿ ಹಾಸಿಗೆ ಹಿಡಿದನೆಂದರೆ ಎಬ್ಬಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ.

ಅದೇ ರೀತಿ **'ಧನಾಗಮನ'** ಎಂದಿದ್ದ ದಿನ ಅದನ್ನೇ ನಂಬಿ ಆಫೀಸಲ್ಲಿ ವಿಧ ವಿಧದ ಲಂಚಕ್ಕೆ ಬಲೆ ಬೀಸುವುದು.

**'ಸುಂದರಿಯ ಭೆಟ್ಟಿ'** ಎಂದಿದ್ದ ದಿನ ಠಾಕು ಠೀಕಾಗಿ ಡ್ರೆಸ್ ಮಾಡಿಕೊಂಡು ಟ್ರಿಮ್ಮಾಗಿ ಕಛೇರಿಗೆ ಹೋಗಿ ಲಲನಾ ಮಣಿಯರ ಬೇಟೆಗೆ ತೊಡಗಿ ಹಲ್ಲು ಕಿರಿಯುವುದು.

**'ಮನಃಕ್ಲೇಶ'** ಎಂದಿದ್ದ ದಿನ ಯಾವ ಕ್ಲೇಶವಿಲ್ಲದಿದ್ದರೂ ಮನಸ್ಸಿಗೆ ಮಾತ್ರ ಎಂಥದೋ ಕ್ಲೇಶ ಮಾಡಿಕೊಂಡು ಕೊರಗುವುದು—

**'ವಿಪರೀತ ಖರ್ಚು-ಚಿಂತೆ'**—ಎಂದಿದ್ದ ದಿನ ಖರ್ಚು ಮಾಡುವ ಮೊದಲೇ ಚಿಂತಿಸುತ್ತ ವಿಪರೀತ ಖರ್ಚು ಮಾಡಿ ಇನ್ನಷ್ಟು ಚಿಂತಿಸುವುದು.

**'ರಂಜನೆ—ಧನವ್ಯಯ'** ಎಂದಿದ್ದ ದಿನ ವಿನಾಕಾರಣ ರಂಜನೆಗೆ ಬಿದ್ದು ಅಪಾರ ಧನವ್ಯಯಿಸುವುದು.

ಹೀಗೆ ಪತ್ರಿಕಾ ಭವಿಷ್ಯಗಳೇ ದಿನಭವಿಷ್ಯ ಬರೆಯುವ ಬ್ರಹ್ಮಲಿಖಿತಗಳಾಗಿ ವೆಂಕಟಪತಿ ಯನ್ನು ಯಾವಾಗಲೂ ಮೂಢೀಯನ್ನಾಗಿಯೇ ಇಟ್ಟಿದ್ದವೆನ್ನಲಡ್ಡಿಯಿಲ್ಲ. ಪಾಪ, ಇಂಥ ಮೂಢೀ ವೆಂಕಟಪತಿ, ಪತ್ನಿ ಪಾರ್ವತಮ್ಮನಿಗೆ ಸಂಕಟಪತಿಯಾದದ್ದು ಅವಳ ಕರ್ಮ. ಆಕೆ ಗಂಡನ ಈ ಹವ್ಯಾಸವನ್ನು ಕೆಣಕಿದರೆ ಆತ ಅಷ್ಟೇ ಒರಟಾಗಿ- "ಅದಕ್ಕ್ಯಾರೇನು ಮಾಡೋದೇ ? ನಿನ್ನ ಜೀವನ ಭವಿಷ್ಯವೇ ಹಾಗೆ ಬರಯಲ್ಪಟ್ಟಿದೆ" —ಎಂದು ಪಟಪಟ ಹೇಳಿಬಿಡುತ್ತಿದ್ದ. ಅಂಥ ಗಂಡನ ಹೆಂಡತಿಯಾಗಿದ್ದರಿಂದ ಅವಳ ಜೀವನ ಭವಿಷ್ಯ ಸುಸ್ಪಷ್ಟವಾಗಿದ್ದರಿಂದ ಅವಳು ಹೆಚ್ಚಿಗೆ ಮಾತನಾಡದೆ ಮಿತ-ಭಾಷಿಯಾಗಿಬಿಟ್ಟಿದ್ದಳು. ಆದರೂ ವೆಂಕಟಪತಿಯು ಸಂಸಾರವೆಂಬ ಚಕ್ಕಡಿಯು ನೊಗಕ್ಕೆ ಕಟ್ಟಿದ್ದ ಒಂದು ಎತ್ತು ಅವಳಾಗಿದ್ದರಿಂದ ಪೂರ್ತಿ ನಿಂತುಬಿಡಲೂ ಆಗುತ್ತಿರಲಿಲ್ಲ. ಅನಿವಾರ್ಯವಾಗಿ ಅವಳು ಅದನ್ನು ಎಳೆದುಕೊಂಡು ಸಾಗಲೇಬೇಕಾಗಿತ್ತು.

*

"ರೀ...ಏಳ್ರಿ...ಆಫೀಸಿಗೆ ಹೋಗೋ ಹೊತ್ತಾಗ್ತಾ ಬಂದಿದೆ. ಎದ್ದು ಸ್ನಾನ ಮಾಡೇಳ್ರಿ"—ಪಾರ್ವತಮ್ಮನ ಕೂಗು ಅಡಿಗೆ ಮನೆಯಿಂದ.

"ಏ, ನಿಲ್ಲೆ! ಏನ್ ಗೊಣಗ್ತಾ ಇದ್ದೀ. ಇವತ್ತಿನ ದಿನ ಭವಿಷ್ಯದಲ್ಲಿ 'ಕೆಲಸದಲ್ಲಿ ವಿಳಂಬ' ಎಂದಿದೆ"—ಬೆಳಿಗ್ಗೇನೆ ಪತ್ರಿಕೆಯ ದಿನಭವಿಷ್ಯದ ಕಾಲಂನ್ನು ನೋಡಿ ಬಂದು ಗಡದ್ದಾಗಿ ಮಲಗಿದ್ದ ವೆಂಕಟಪತಿ ಶಯನಾಸನದಲ್ಲೇ ಕೂಗಿ ಹೇಳಿದ.

"ಮನೆಯಲ್ಲಿ ಎಲ್ಲಾ ಸಾಮಾನು ಮುಗಿದಿದೇರಿ, ಪಕ್ಕದ ಅಂಗಡಿಗೆ ಗೋಗಿ ತಂದಾದ್ರೂ ತರಬರ್ರೀ"... ಪಾರ್ವತಮ್ಮನ ಅಳಲು ಮತ್ತೆ.

"ತಡೆಯೇ, 'ವ್ಯಾಪಾರದಲ್ಲಿ ಲಾಭ' ಅಂತ ದಿನಭವಿಷ್ಯ ಬರಲಿ ಅಂತ ಕಾಯ್ತಾ ಇದೀನಿ"— ಆತನ ಸಮಜಾಯಿಷಿ ಉತ್ತರ. ಪಾರ್ವತಮ್ಮ ಅದನ್ನೆಲ್ಲ ಕೇಳಿ ಕಿಡಿ ಕಿಡಿ ಯಾಗುತ್ತಾಳೆ—

'ಹಾಳಾಯ್ತು ನಿಮ್ಮ ಭವಿಷ್ಯ. ಎಲ್ಲಾದಕ್ಕೂ ಆ ಸುಡುಗಾಡು ಭವಿಷ್ಯದಲ್ಲೇ ಬರೆದಿರ ಬೇಕು ನಿಮಗೆ. ಮಗಳು ಬೆಳೆದು ನಿಂತಿದ್ದಾಳ್ರಿ ಯಾರಿಗಾದ್ರೂ ಹೇಳಿ ಒಳ್ಳೇ ವರಾ ಹುಡುಕ್ರಿ ಎಂದ್ರೆ— ಮಗಳಿಗೆ 'ಕಂಕಣ ಬಲ' ಅಂತ ದಿನಭವಿಷ್ಯ ಬರ್ಲಿ

ಅಂತೀರಿ, ಮನಿಯಾಗ ಎಲ್ಲಾರ ಬಟ್ಟೇನೂ ಹರಿದು ಹೋಗ್ಯಾವ ಒಟ್ಟೆ ತನಿ ಅಂದ್ರೆ—'ಜವಳಿ ಖರೀದಿ' ದಿನಭವಿಷ್ಯ ಬರ್‍ಲಿ ಅಂತೀರಿ, ಇದನೆಲ್ಲಾ ನೋಡಿ ಕೇಳಿ ಬ್ಯಾಸರಾಗಿ ಒಂದ ಸಿನಿಮಾಕ್ಕಾದ್ರೂ ಕರಕೊಂಡು ಹೋಗ್ರಿ ಅಂದ್ರೆ 'ಮನರಂಜನೆ' ಅನ್ನೂ ದಿನಭವಿಷ್ಯದ ಉದಾಹರಣೆ ತೋರಸ್ತೀರಿ, ಎಲ್ಲಾದಕ್ಕೂ ಭವಿಷ್ಯ, ಭವಿಷ್ಯ!! ಹಾಳಾಯ್ತು ನಿಮ್ಮ ಭವಿಷ್ಯ. ಅದಾವ ರಾಹುಕಾಲದಲ್ಲಿ ಮದುವೆ ಯಾದ್ನೋ ನಾನು? ನನ್ನ ಭವಿಷ್ಯದ ಕಥೆ ಕೇಳೂವವರು ಇಲ್ಲ, ಇದೆಲ್ಲ ನನ್ನ ಕರ್ಮ" ಎನ್ನುತ್ತ ಪಾರ್ವತಮ್ಮ ಯಥಾ ರೂಢಿಯಂತೆ ಒಂದಿಷ್ಟು ಒದರಾಡಿ ಮತ್ತೆ ಅಡಿಗೆ ಮನೆ ಸೇರಿದರು. ಇತ್ತ ವೆಂಕಟಪತಿ ವಾರ ಪತ್ರಿಕೆಯಲ್ಲಿ ನಿನ್ನೆಯೇ ಗಮನಿಸಿದ್ದ "ಹೆಂಡತಿಯಿಂದ ಕಿರಿಕಿರಿ" ಎಂಬ ಭವಿಷ್ಯ ನಿಜವಾಯ್ತೆಂದು ಭಾವಿಸಿ, ತನ್ನ ಮೇಷರಾಶಿಯನ್ನು ಅನ್ವರ್ಥಗೊಳಿಸುವ ಹಾಗೆ ಮಗ್ಗುಲು ಬದಲಿಸಿ ಮೋಷ ನಿದ್ರೆಯಲ್ಲಿ ಮುಳುಗಿಬಿಟ್ಟ.

*

ಕಿರ್‍...ಕಿರ್‍...ಕಿರ್‍ರ್‍... ವೆಂಕಟಪತಿಯ ಆಫೀಸ್ ಸಹೋದ್ಯೋಗಿ ಮಿತ್ರ ಕಲ್ಲೇಶಿಯ ಸ್ಕೂಟರ್‌ನ ಹಾರ್ನ್ ಅದು. ವೆಂಕಟಪತಿಗೆ ದಿನಾಲೂ ಡ್ರಾಪ್ ಕೊಡುವ ಅತೀ ಆತ್ಮೀಯ ಸ್ನೇಹಿತ ಕಲ್ಲೇಶಿ. ಆಫೀಸ್ ವೇಳೆಗೆ ಸರಿಯಾಗಿ ಬಂದು ಹಾರ್ನ್ ಮಾಡಿದ್ದ ಆತನ ಸ್ಕೂಟರ್‌ನ ಕಿರುಚಾಟದಿಂದ ಗಪ್ಪನೆ ಎಚ್ಚರಗೊಂಡ ವೆಂಕಟಪತಿ ದಡಬಡ ಮಾಡುತ್ತ, ಅವಸರವಸರವಾಗಿ ಸ್ನಾನ ಮಾಡಿ, ಅದನ್ನೋ ಇದನ್ನೋ ಗಂಟಲಿಗೆ ತುರುಕಿದ. ಕಲ್ಲೇಶಿಯ ಸ್ಕೂಟರ್‌ನ ಹಿಂಭಾಗದಲ್ಲಿ ಕುಳಿತು ಎರಡು ಕಿಲೋಮೀಟರ್ ಹೋದ ಮೇಲೆಯೇ ಆತನಿಗೆ ನೆನಪಾದದ್ದು, ಊಟದ ಡಬ್ಬಿಯನ್ನು ಮನೆಯಲ್ಲಿಯೇ ಮರೆತು ಬಂದಿದ್ದೇನೆ ಎಂದು. ಪಕ್ಷ ಪತ್ರಿಕೆಯಲ್ಲಿ ಓದಿದ್ದ 'ವಾರಾಂತ್ಯದಲ್ಲಿ ತರಾತುರಿ—ಮರೆವು'—ಎಂಬ ಭವಿಷ್ಯ ನಿಜವಾಯ್ತೆಂದು ಕೊಳ್ಳುತ್ತ ಆಫೀಸ್ ಸೇರಿದ ವೆಂಕಟಪತಿ. ಆಗಲೇ ಅರ್ಧ ತಾಸು ಲೇಟಾಗಿತ್ತು. ಬಾಸ್ ತರಾಟೆಗೆ ತೆಗೆದುಕೊಂಡ. ನಾಲ್ಕಾರು ಬೈಯ್ಗುಳ. ಛೀ, ಥೂ ಹಾಕಿಸಿ ಕೊಂಡಾದ ಮೇಲೆ ನಿನ್ನೆ ಮಾಸಪತ್ರಿಕೆಯ ಭವಿಷ್ಯಪುಟದಲ್ಲಿ '—ಬಾಸ್‌ನಿಂದ ಬೈಯ್ಗುಳ–ಮನಕ್ಲೇಶ' ಎಂದು ಓದಿದ್ದನ್ನು ನೆನಪಿಸಿಕೊಳ್ಳುತ್ತ ನಿಧಾನವಾಗಿ ಕೆಲಸಕ್ಕೆ ತೊಡಗಿದ. ಆತ ಅಂತೂ ಅಂದಿನ ಪತ್ರಿಕೆಯ ದಿನಭವಿಷ್ಯ ಕಾಲಂನಲ್ಲಿದ್ದ 'ಕೆಲಸದಲ್ಲಿ ವಿಳಂಬ' ಎಂಬುದನ್ನು ನೂರಕ್ಕೆ ನೂರು ವಾಸ್ತವವನ್ನಾಗಿ ಮಾಡಿದ್ದ.

ತಿಂಗಳ ಆದಾಯವನ್ನೇ ಬಹುತೇಕ ಆಧಾರವಾಗಿಟ್ಟುಕೊಂಡು ಏರಿಕೆಯಿಂದ ಇಳಿಕೆ ಕ್ರಮದಲ್ಲಿ ಸುಖ-ಸಂತೋಷಗಳನ್ನು ವ್ಯವಸ್ಥಿತವಾಗಿ ಹಂಚಿಹಾಕುತ್ತಿದ್ದ ಭವಿಷ್ಯ ಕಾಲಂನ ಅಂತರಾರ್ಥವನ್ನು ಅರಿಯಲಾರದ ವೆಂಕಟಪತಿ ಅದರ ಪರಮ ಆರಾಧಕ ನಾಗಿದ್ದ. ತಿಂಗಳಾರಂಭದಲ್ಲಿ 'ಧನಾದಾಯ–ಖರ್ಚು ಸಮಸಮ,' ಎರಡನೆಯ

ವಾರದಲ್ಲಿ 'ನೆಮ್ಮದಿಯ ಜೀವನ', ಮೂರನೆಯ ವಾರದಲ್ಲಿ 'ಅಷ್ಟಿಷ್ಟು ಕೊರತೆ-ತೊಂದರೆ' ಹಾಗೂ ನಾಲ್ಕನೆಯ ವಾರದಲ್ಲಿ 'ಕೈ ಖಾಲಿ-ಖರ್ಚಿಗಾಗಿ ಸಾಲ'-ಎಂಬ ಈ ಬ್ರಾಡ್ ಔಟ್‌ಲೈನ್‌ನಲ್ಲೇ ವರ್ಗೀಕರಣಗೊಳ್ಳುತ್ತಿದ್ದ ಭವಿಷ್ಯಕ್ಕೆ ಎಂಥೆಂಥ ಲಾಜಿಕ್ಕುಗಳೂ ಸೋತಿರುವಾಗ ವೆಂಕಟಪತಿ ಯಾವೂರ ಲೆಕ್ಕ ! ಅಂತೆಯೇ ವಾರ, ಪಕ್ಷ, ಮಾಸ ಹಾಗೂ ದಿನಪತ್ರಿಕೆಗಳಲ್ಲೆಲ್ಲ ತುಂಡುತುಂಡಾಗಿ ಡಿಸೆಕ್ಟ್ ಮಾಡಿಸಿಕೊಂಡು ಬರುತ್ತಿದ್ದ ಭವಿಷ್ಯ ಆತನನ್ನು ಆಡಿಸುವ ಸೂತ್ರವಾದದ್ದರಲ್ಲಿ ಆಶ್ಚರ್ಯ-ವೇನೂ ಇಲ್ಲ.

ಇನ್ನೂ ಒಂದು ತರ್ಕದ ಸತ್ಯ ನಿತ್ಯ ಭವಿಷ್ಯವನ್ನಾಳುತ್ತಿದ್ದುದು ಕೂಡಾ ವೆಂಕಟಪತಿಗೆ ಗಮನಕ್ಕೆ ಬರದಿರುವುದು ಆತನ ಭವಿಷ್ಯಾರಾಧನಾ ಮನಕ್ಕೆ ಸಾಕ್ಷಿಯಾಗಿತ್ತು. ಆ ಲಾಜಿಕ್ಕು ಯಾರನ್ನಾದರೂ ಮಂಕು ಮಾಡುವಂಥದ್ದು. ಉದಾಹರಣೆಗೆ–

"ದೂರಪ್ರಯಾಣ—ಅಧಿಕ ವೆಚ್ಚ" (ದೂರ ಪ್ರಯಾಣ ಮಾಡಿದರೆ ಅಧಿಕ ವೆಚ್ಚ ಆಗದೇ ಇರುತ್ತದೆಯೇ ?)

"ಸುಗ್ರಾಸ ಭೋಜನ- ಅಜೀರ್ಣ" (ಸಿಕ್ಕಿತೋ, ಸಿಗಲಿಲ್ಲವೊ ಎಂದು ಹೊಟ್ಟೆ ಹರಿಯುವಷ್ಟು ತಿಂದರೆ ಅಜೀರ್ಣವಾಗದೆ ಇರ್‍ತದೆಯೇ ?)

"ಅತಿಥಿಗಳ ಆಗಮನ- ಹಣ, ಸಮಯ ಹಾಳು" (ತಿಥಿಯರಿಯಂದೇ ಅತಿಥಿಗಳು ಬಂದರೆ ಇನ್ನೇನಾಗಬೇಕು ? )

"ಹೊಸ ಯಂತ್ರ ಖರೀದಿ— ಒಂದಿಷ್ಟು ಅಪಾಯ" (ಸರಿಯಾಗಿ ಆಪರೇಟ್ ಮಾಡದಿದ್ದರೆ ಅಪಾಯವಲ್ಲದೆ ಇನ್ನೇನು ?)

"ಮಗನಿಂದ ಕ್ಯಾತೆ— ಮಾನಸಿಕ ವ್ಯಥೆ" (ಮಗರಾಯ ಜಗಳ ತಂದರೆ ಮನಸ್ಸಿಗೆ ವ್ಯಥೆಯಾಗಲಾರದೇ ? )

"ತಿಂಗಳ ಕೊನೆಯಲ್ಲಿ ಹಣ ಅಭಾವ" (ಇದನ್ನು ಸಾಕ್ಷೀಭೂತವಾಗಿ ಸಾಧಿಸಿ ತೋರಿಸಲು ಆಧಾರ ಬೇಕೆ ?)

ಈ ಥರದ ನ್ಯಾಯದೇವತೆಯ ತಕ್ಕಡಿ ತೂಕದ ಹೇಳಿಕೆಯಂತಿರುವ ಭವಿಷ್ಯೋಕ್ತಿಗಳು ಪರಸ್ಪರ ಪೂರಕ ಸಂಬಂಧದಲ್ಲಿ ಕ್ರಿಯಾಶೀಲವಾಗಿ ಮೇಲ್ನೋಟಕ್ಕೆ ಸತ್ಯದ ಮುಖದ ಮೇಲೆ ಚಪ್ಪಾರನೇ ಹೊಡೆದಂತಾಗುತ್ತಿದ್ದುದರಿಂದ ವೆಂಕಟಪತಿ ಅವುಗಳ ಲಾಜಿಕಲ್ ಟ್ರೂಥ್ ಬಗ್ಗೆ ತಲೆಕೆಡಿಸಿಕೊಳ್ಳುವ ಅಗತ್ಯವೇ ಇರಲಿಲ್ಲ. 'ಭವಿಷ್ಯಾಧೀನಂ ವೆಂಕಟಪತಿ' ಎಂಬಂತಾಗಿ ಹೋಗಿದ್ದ ಆತ.

*

ಅದೊಂದು ತಿಂಗಳಾಂತ್ಯ ದಿನ. ವೆಂಕಟಪತಿ ಎಂದಿನಂತೆ ನಸುಬೆಳಿಗ್ಗೆ ಎದ್ದು ಕಾಂಪೌಂಡಿನೊಳಗಡೆ ಅನಾಥವಾಗಿ ಬಿದ್ದಿದ್ದ ದಿನಪತ್ರಿಕೆಯನ್ನು ಎತ್ತಿಕೊಂಡ.

ಲಗುಬಗೆಯಿಂದ ಬಿಚ್ಚಿ ದಿನಭವಿಷ್ಯದ ಕಾಲಂ ಮೇಲೆ ಕಣ್ಣೋಡಿಸಿದ. ನೋಡ ನೋಡುತ್ತಿದ್ದಂತೆಯೇ ಆತನ ಎದೆಗೆ ಕಲ್ಲು ಬಡಿದಂತಾಯಿತು. ಕಣ್ಣು ಮಂಜಾ ದವು. ಕಾಲು ಮೇಲೇಳದಾದವು. ಒಂದು ಕ್ಷಣ ಛೀ ಅನ್ನಿಸಿತು. ಅದರ ಜೊತೆಗೆಯೇ ಕೆಂಡದಂತಹ ಕೋಪವೂ ಉಕ್ಕಿ ಬಂತು. ಎಲ್ಲವನ್ನೂ ಅನುಭವಿಸುತ್ತಲೇ ಸಾವರಿಸಿ ಕೊಂಡು ಒಳಗೆ ಬಂದ ವೆಂಕಟಪತಿ ರಗ್ಗನ್ನು ಎಳೆದುಕೊಂಡು ಗಡದ್ದಾಗಿ ಮಲಗಿ ಕೊಂಡು ಬಿಟ್ಟ. 'ಅದ್ಹ್ಯಾಗೆ ಆಗ್ತದೋ ನೋಡೇಬಿಡ್ತೀನಿ—ಇವತ್ತು. ಬಾಸ್ ಏನು ಬೇಕಾದ್ದು ಮಾಡ್ಕೊಳ್ಳಿ. ಆಫೀಸ್ಗೆ ಹೋಗದೇ ಮನೆಯಲ್ಲೇ ಇದ್ದು ನೋಡ್ತೇನೆ'—ಎಂದು ಮನಸ್ಸಿನಲ್ಲಿಯೇ ದೃಢ ನಿಶ್ಚಯ ಮಾಡಿಕೊಂಡ ಆತ ಕುತೂ ಹಲದಿಂದ ಮುಂದಿನದೆಲ್ಲವನ್ನೂ ಕಳ್ಳಬೆಕ್ಕಿನಂತೆ ಕಾಯತೊಡಗಿದ. ಅದೇನೂ ಹೊಸ ರೀತಿಯದಾಗಿರಲಿಲ್ಲವಾದ ಕಾರಣ ಪಾರ್ವತಮ್ಮ ತನ್ನಷ್ಟಕ್ಕೆ ತಾನೆ ಮಾಮೂಲಿ ಕೆಲಸದಲ್ಲಿ ತೊಡಗಿದರು.

ಆಫೀಸಿಗೆ ಹೋಗುವ ಹೊತ್ತಾಗುತ್ತ ಬಂತು. ಎಷ್ಟು ಎಬ್ಬಿಸಿದರೂ ಏಳಲಾರದ ಗಂಡ ಅಂತೂ ತಾನಾಗೇ ಗಡಬಡಿಸಿ ಏಳುವುದು ಮಾಮೂಲಿಯಾಗಿದ್ದ ಕಾರಣ ಪಾರ್ವತಮ್ಮ ಅಂದು ಆತನನ್ನು ಮೊದಲು ಎಬ್ಬಿಸಲು ಹೋಗಲೇ ಇಲ್ಲ. ಹೊತ್ತು ಮೀರುತ್ತ ಬಂದ ಹಾಗೆ ಅವಳಿಗೆ ತಡೆಯದಾಯ್ತು. ಒಂದು, ಎರಡು, ಮೂರು. ನಾಲ್ಕು—ಹೀಗೆ ಹಲವಾರು ಬಾರಿ ಪದೇ ಪದೇ ಬಂದು ಎಬ್ಬಿಸತೊಡಗಿದಳು. ಗಂಡನಿಗೆ ಲೇಟ್ ಆಗುವುದೆಂಬ ಒತ್ತಡ ಆಕೆಯದಾದರೆ, ಅವಳು ತನ್ನನ್ನು ಎಬ್ಬಿ ಸಲು ಇಷ್ಟೊಂದೇಕೆ ಒತ್ತಾಯ ಮಾಡುತ್ತಿರಬಹುದು ? ಎಂಬ ಸಂಶಯ ವೆಂಕಟ ಪತಿಯದು. ಹೆಂಡತಿಯ ಒತ್ತಾಯವನ್ನು ಆತ ಅಂದಿನ ದಿನಭವಿಷ್ಯದೊಂದಿಗೆ ತಾಳೆ ಹಾಕಿ ನೋಡಿದ. ಆತನ ಮೈ ಉರಿದು ಹೋಯ್ತು. ಕಾಕತಾಳೀಯ ವೆಂಬಂತೆ ಆದಿನ ಆತನ ಮಿತ್ರ ಪಿಕಪ್‌ಗಾಗಿ ಬರಲಿಲ್ಲ. ಹಿಂದಿನ ದಿನವೇ ಕಲ್ಲೇಶಿ "ನಾನು ನಾಳೆ ರಜೆ ಹಾಕಿದ್ದೀನಿ, ನೀನೊಬ್ಬನೇ ಹೇಗಾದರೂ ಆಫೀಸಿಗೆ ಹೋಗು" ಎಂದಿದ್ದ ಮಾತು ಸಟಕ್ಕನೆ ನೆನಪಾಗಿ ವೆಂಕಟಪತಿಗೆ ಮೂರ್ಛೆ ಬಂದಂತೆಯೇ ಆಯ್ತು. ನಡೆಯುತ್ತಿದ್ದ ಎಲ್ಲ ಆಕಸ್ಮಿಕಗಳೂ ಆತನ ಕಣ್ಣಲ್ಲಿ ಸಂಚಿನ ತಂತ್ರಗಳಾಗಿ ಕಂಡವು. ಅಂದಿನ ದಿನಭವಿಷ್ಯಕ್ಕೆ ತಕ್ಕಂತೆಯೇ ಎಲ್ಲಾ ನಡೆಯುತ್ತಿದೆ ಎಂದು ಸಿಡಿಮಿಡಿಗೊಂಡ ವೆಂಕಟಪತಿ ಅಂದು ಮಾತ್ರ ಭವಿಷ್ಯ ಸೂಚಿಯ ಎದುರು ಉರಿದೆದ್ದ., ಆ ವಯಸ್ಸಿನವರೆಗೂ ನಂಬಿಕೊಂಡು ಬಂದಿದ್ದ ಭವಿಷ್ಯದ ಬಗ್ಗೆ ಆತ ನಿಗೆ ಅಸಹ್ಯಕರ ತಿರಸ್ಕಾರದ ಭಾವನೆ ಮೂಡಿತ್ತು. ಹೆಂಡತಿಯ ಬಗ್ಗೆ, ಕಲ್ಲೇಶಿ ಯಂಥ ಆತ್ಮೀಯ ಗೆಳೆಯನ ಬಗ್ಗೆ ಅವನಲ್ಲಿ ಕ್ರೂರ ಸಿಟ್ಟು ಹುಟ್ಟಿತು. ಏನಾದರೂ ಆಗಲಿ ಇವತ್ತು ಈ ದಿನಭವಿಷ್ಯವನ್ನು ಸುಳ್ಳು ಮಾಡೇ ತೀರಬೇಕು, ಎಂದು ಮನ ಸ್ಸಿನಲ್ಲೇ ಪಣತೊಟ್ಟು ಎಚ್ಚರಿದ್ದುಕೊಂಡೇ ಮಲಗಿದ.

"ರೀ ಏಳ್ರೀ...ಟೈಮು ಆಗೇ ಹೋಯ್ತು..." ಪಾರ್ವತಮ್ಮ ಒದರಿದಳು. ವೆಂಕಟಪತಿ ಮೌನ ಮುರಿಯಲಿಲ್ಲ.

ಇನ್ನೂ ಗಟ್ಟಿಯಾಗಿ ಪಾರ್ವತಮ್ಮ "ಅದೆಂಥಾ ನಿದ್ದೀ ಮಾಡ್ತೀರಿ? ಆಫೀಸ್ ಟೈಮು ಆಗಿ ಮತ್ತೆ ಹತ್ತು ಹದಿನೈದು ನಿಮಿಷಾಯ್ತು. ಈಗಾದ್ರೂ ಏಳ್ತೀರೋ ಇಲ್ಲೋ ?" ಎಂದು ಸಿಟ್ಟನ್ನೆಲ್ಲಾ ಕೇಂದ್ರೀಕರಿಸಿ ಕೂಗಿದಳು.

ವೆಂಕಟಪತಿ ಇನ್ನು ಮುಂದೆ ಸಹಿಸಿಕೊಳ್ಳದಾದ.

"ಏನೇ ನನ್ನನ್ನ ಆಫೀಸ್ಗೆ ಕಳಿಸಿ ನೀನು ಮಜಾ ಮಾಡಬೇಕು ಅಂತ ಮಾಡೀಯಾ ? ನನಗೇನೂ ಗೊತ್ತಿಲ್ಲ ಅಂತ ಮಾಡೀಯಾ ?" ಎಂದು ಚೀರಿದ.

"ಏನ್ರೀ ನೀವನ್ನೋದು ? ನಿಮ್ಮನ್ನ ಕಳಿಸಿ ನಾನು ಮಜಾ ಮಾಡ್ತೀನಾ ? ನಾಲಿಗೀ ಬಿಗಿ ಹಿಡಿದು ಮಾತಾಡ್ರೀ". ಪಾರ್ವತಮ್ಮ ತುಸು ಗಡುಸಾಗಿಯೇ ಉತ್ತರ ಕೊಟ್ಟಳು. "ಹೌದೇ ಗಂಡನಿಗೆ ಇಷ್ಟೊಂದು ಗಟ್ಟಿಯಾಗಿ ಮಾತಾಡೋ ನೀನು ಏನೇನು ಮಾಡ್ತೀಯೋ ಎಲ್ಲಾ ಗೊತ್ತು. ಥೂ ನಿನಗೆ ನಾಚಿಕೆ ಆಗಬೇಕು". ಇನ್ನೂ ಕೀಳು ರೀತಿಯಲ್ಲಿ ಅರಚಿದ ವೆಂಕಟಪತಿ.

"ಯಾಕ್ರಿ, ಇದ್ದಕ್ಕಿದ್ದ ಹಾಗೆ ನಿಮಗೇನಾಗಿದೇರಿ ? ಏನೇನೋ ಮಾತಾಡ್ತಾ ಇದ್ದೀರಲ್ಲ ? ಬಹುಶಃ ಪತ್ರಿಕೆಯೊಳಗ ಬಂದಿರೋ ಇಂದಿನ ದಿನಭವಿಷ್ಯದ ಪರಿಣಾಮಾನೇ ಇರಬೇಕು ಇದು" ಎಂದು ಸರಿಯಾಗಿ ಗುರುತಿಸಿದ ಪಾರ್ವತಮ್ಮ ಸಟಕ್ಕನೆ ಹೋದವಳೇ ಪೇಪರಿನ ದಿನ ಭವಿಷ್ಯದ ಕಾಲಂ ತೆಗೆದು ಮೇಷರಾಶಿಯ ಭವಿಷ್ಯ ನೋಡುತ್ತಾಳೆ-ಛೀ ಅನಿಸಿತು ಅವಳಿಗೆ. ಗಂಡನ ವರ್ತನೆಗೆ ಕಾರಣವಾದ ಆ ಭವಿಷ್ಯವನ್ನು ಓದಲೂ ಅವಳ ಮನಸ್ಸಿಗೆ ಅಸಹ್ಯ ವೆನಿಸಿತು. ಏನಿತ್ತು ಆ ಭವಿಷ್ಯ ?... ಎಲ್ಲ ಕಾಂಪೋಜ ಮಾಡಿ ಮಾಲಿಕ, ಕಂಪೋಜಿಟರ್, ಪ್ರೂಫ್ ರೀಡರ್ ಮನೆಗೆ ಹೋದ ಮೇಲೆ ಓದುಗರೊಂದಿಗೆ ಒಂದಿಷ್ಟು ಗೇಲಿ ಮಾಡಬೇಕೆಂದುಕೊಂಡ ಪತ್ರಿಕೆಯ ಮುದ್ರಕ ಉದ್ದೇಶಪೂರ್ವಕವಾಗಿ ಹಾಕಿದ್ದ ಪ್ರಾಸಬದ್ಧವಾದ ಮೇಷ ರಾಶಿಯ ಭವಿಷ್ಯ ಏನಾಗಿತ್ತು ಗೊತ್ತೆ ?

"ಮಿತ್ರನಿಂದ ಪುತ್ರ ಲಾಭ!!!!"

ಭವಿಷ್ಯ ನಂಬಿ ಅದರ ಆಳಾಗಿ ನಡೆಯುತ್ತಿದ್ದ ವೆಂಕಟಪತಿಗೇನೋ ಅದು ಸಂಕಟ ಪ್ರಸಂಗ. ಆದರೆ ಸದ್ಗೃಹಿಣಿ ಪಾರ್ವತಮ್ಮ ಏನು ಮಾಡಬೇಕು ಹೇಳಿ ?

●

# ಸ್ವಾತಂತ್ರ್ಯ ಪೂರ್ವ ಕಥಾ ಸಾಹಿತ್ಯ: ಜನಪರ ದೃಷ್ಟಿ

ಹರಿಹರ ಪ್ರಿಯ

ಇತ್ತೀಚಿನ 'ಮಿಸ್ಸಿಂಗ್ ಲಿಂಕ್' ಎಂಬ ಅರ್ಥಪೂರ್ಣವಾದ ತಮ್ಮ ಪುಸ್ತಕದ 'ಲೇಖಕರ ಮಾತಿ'ನಲ್ಲಿ ಪೂರ್ಣಚಂದ್ರ ತೇಜಸ್ವಿಯವರು: "ಕನ್ನಡದಲ್ಲಿ ಏನೂ ಇಲ್ಲ, ಇರುವುದೆಲ್ಲ ಬೂಸಾ ಎನ್ನುವವರೂ, ಕನ್ನಡದಲ್ಲಿ ಸರ್ವಸಮಸ್ತವೂ ಇದೆ ಎನ್ನುವವರೂ ಕೊಂಚ ವಿವೇಕ ತೋರಿ ಮೌನ ವಹಿಸಿದರೆ ನಮ್ಮ ಮುಂದಿರುವ ಅಗಾಧ ರಚನಾತ್ಮಕ ಜವಾಬ್ದಾರಿಗಳನ್ನು ನಿರ್ವಹಿಸಲು ತುಂಬ ಅನುಕೂಲವಾಗುತ್ತದೆ. ಕನ್ನಡ ಭಾಷೆಯ ಏಳಿಗೆಗೂ ಅಪಾರ ಸಹಾಯವಾಗುತ್ತದೆ." ಎಂದಿದ್ದಾರೆ.

ಈಗ ನನ್ನ ನಿಮ್ಮ ಸ್ಥಿತಿ ಇದಕ್ಕೆ ಮುಖಾಮುಖಿಯಾಗಿದೆ.

ಕನ್ನಡದ ಸಾಹಿತ್ಯ ಈ ಬೂಸಾ, ಜನಪರ, ವಿವೇಕ, ಮೌನಗಳ ನಡುವೆ 'ಮಿಸ್ಸಿಂಗ್ ಲಿಂಕ್' ಆಗಿ ಹೋಗಿದೆ, ನಮ್ಮನ್ನು ನಾವು ಕಂಡುಕೊಳ್ಳಲು ಆದೀತೆ, ನಮ್ಮ ಅಸ್ತಿತ್ವ ಕಾಪಾಡಿಕೊಳ್ಳಲು ಆದೀತೆ ನೋಡಬೇಕಾಗಿದೆ.

ಹಾಗಾದರೆ ಜನ-ಪರ ಎಂದರೇನು ? ಜನಪರ ಅನ್ನುವಾಗ, ಜನ-ವಿರೋಧಿ ಎನ್ನುವ ಇನ್ನೊಂದು ವರ್ಗವೂ ಕೂಡಾ ಇದೆ ಎಂದಂತೆಯೇ ಆಗಲಿಲ್ಲವೆ ? ಅಂದರೆ ನಾವು ಕಾಣುತ್ತಿರುವ ಸಾಹಿತ್ಯದಲ್ಲಿ ಜನ-ಪರವೂ, ಜನ-ವಿರೋಧಿಯೂ ಇದೆ ಎಂದಂತೆ ಆಯಿತಲ್ಲವೆ ?

ಬರೆಯುವ ವ್ಯಕ್ತಿ, ಗಂಡಾಗಲಿ ಹೆಣ್ಣಾಗಲಿ ಜನವೆ ತಾನೆ! ಅಂದ ಮೇಲೆ, ತನ್ನ-ತನ್ನ ಪರ-ತನ್ನಂಥವರ ಪರವಾಗಿಯೇ ಕೃತಿ ರಚನೆ ಮಾಡುವುದು, ಮಾಡಲಿಕ್ಕಾಗಿಯೇ

ತೊಡಗುವುದು–ರಚನೆಯು ಉದ್ದೇಶವಲ್ಲದೆ ಬೇರೆ ಏನಾಗಿದ್ದೀತು ? ಅಂಥಾದ್ದನ್ನು ಬೇರೆಯುವರು ಬೇರೆ ಗುಂಪು ಒಪ್ಪಬಹುದು–ಬಿಡಬಹುದು. ಈ ಪರ-ವಿರೋಧ ಹಾಗಾದರೆ ಇದ್ದದ್ದೆ ಅಲ್ಲವೆ ?

ಬೇರೆಯುವರ ಮಾತು ಹಾಗಿರಲಿ. ವಿಚಿತ್ರ ಹಾಗೂ ಆಭಾಸ ಏನೆಂದರೆ: ಕೃತಿ ರಚನೆಯಲ್ಲಿ ತೊಡಗಿರುವ ವ್ಯಕ್ತಿ. ತಾನು ಹೇಳಬೇಕು ಅಂದುಕೊಂಡದ್ದು ಹಾಗು ಕೃತಿಯೇ ಹೇಳುವುದು-ಇವುಗಳಲ್ಲಿ ವಿರೋಧ ಹೊರಡುತ್ತಿರುವುದಕ್ಕೂ ಸಾಕು. ಇದನ್ನು ಬೇಕಾದರೆ ಕೃತಿಕಾರನನ್ನು ಮೀರಿದ ವಸ್ತು ಆಶಯ ರಚನೆ ಎಂದು ಕರೆಯಬಹುದು. ವಸ್ತುವೇ ತನ್ನ ಆಶಯುವನ್ನು ರಚಿಸಿಕೊಳ್ಳುವಂತಹದ್ದು. ಆ ವಸ್ತು. ಆ ಆಶಯ, ಆ ರಚನೆ. ಅವುಗಳ ಮಾಧ್ಯಮವಾದ ಭಾಷೆ: ಇಷ್ಟೆಲ್ಲದರ ಮೂಲ ಬಿಂದುವಾದ ಮಾನವ– ಒಂದು ಕಾಲದ-ಸಮಾಜದ ಕೇಂದ್ರಿತ ವಸ್ತು, ಆಶಯ, ರಚನೆ. ಭಾಷೆ, ಮಾನವ ಎಂದರೆ; 'ಮಿಸ್ಸಿಂಗ್‌ಲಿಂಕ್' ಆಟದಲ್ಲಿ, ತಲೆ ತಿರುಗು ಬರಬಹುದು.

ಈ ಬಗ್ಗೆ. ಕೃತಿಕಾರನಿಗೆ ಮೀರಿ ಕೃತಿ ಮಾತಾಡುವ ಬಗ್ಗೆ. ಇತ್ತೀಚಿಗೆ ಕನ್ನಡದಲ್ಲಿ ಚರ್ಚೆ ಎದ್ದಿದೆ. ಆದು ಸರಿ. ಹೀಗೇಕೆ ಆಯಿತು ? ಆಗುತ್ತದೆ ? ಕೃತಿಕಾರನಿಗೆ ಕೃತಿಯ ಬಗ್ಗೆ ಅಂದರೆ ಭಾಷೆ-ವಸ್ತು-ಆಶಯ–ರಚನೆ ಬಗ್ಗೆ ಹಿಡಿತ ಇಲ್ಲ ಎಂದು ಅರ್ಥವೆ ? ಕ್ರಾಂತಿಕಾರರು ಇವೆಲ್ಲವನ್ನು ತಮ್ಮ ಹಿಡಿತದಲ್ಲಿ ತೆಗೆದುಕೊಂಡು ದುಡಿಸಿಕೊಳ್ಳುತ್ತಾರೆ., ಸಂಪ್ರದಾಯಸ್ಥರು ಇವೆಲ್ಲದರ ಹಿಡಿತಕ್ಕೆ ಒಳಗಾಗಿ ಅಡಗಿರುತ್ತಾರೆ–ಎಂದು ಅರ್ಥವೇ ? ಪ್ರಜ್ಞಾವಂತಿಕೆಗೂ ಸುಪ್ತಪ್ರಜ್ಞೆಗೂ ಮಧ್ಯೆ, ಭಾಷೆ. ಸಾಮಾಜಿಕ ಭಾಷೆ. ಸಾಹಿತ್ಯಿಕ ಭಾಷೆ-'ಮಿಸ್ಸಿಂಗ್ ಲಿಂಕ್' ಆಗಿ ಕೆಲಸ ಮಾಡುತ್ತಿದೆ ಎಂದು ಅರ್ಥವೆ ? ಜನ-ಪರ, ಜನ–ವಿರೋಧಿ ಎಂದು ಗುರುತಿಸಲು ಬಂದೀತೆ ?

ನನ್ನ ಪ್ರಕಾರ. ಜನ-ಪರ, ಜನ ವಿರೋಧಿ ಎಂದರೆ ಬೇರೆ. ಹೀಗಿರಬಹುದೇ ಎಂದು ನಿಮ್ಮೊಂದಿಗೆ ಸಮಾಲೋಚಿಸಲು ಬಯಸುತ್ತಿದ್ದೇನೆ: ರಚನೆ ಮಾಡುವವ (ರಚನೆ ಮಾಡುವವರು ಅಂದರೆ, ಒಂದು ಕೃತಿಯ ವಾರಸುದಾರರು ಆ ಕೃತಿಕಾರ, ಓದುಗ. ವಿಮರ್ಶಕರು ಕೂಡ), ನಿರ್ಮಾಣವಾದ ರಚನೆಯನ್ನು ಒಪ್ಪಿಕೊಳ್ಳುವುದು, ಸನ್ಮಾನಿಸುವುದು, ಪ್ರತಿಷ್ಠಾಪಿಸುವುದು ಅಂದರೆ ಸೃಷ್ಟಿ ಓದು, ವಿಮರ್ಶೆ ಮೂಲಕ ಪ್ರತಿಕ್ರಿಯಿಸುವ ಒಂದು ಕ್ರಮ–ಪ್ರೋಸೆಸ್‌ನಲ್ಲಿಯೋ ಒಂದನ್ನು ಆಯ್ದುಕೊಂಡು ಇನ್ನೊಂದರ ಬಗ್ಗೆ ಮೌನ ವಹಿಸುವುದರಲ್ಲಿಯೋ ಜನಪರ-ಜನವಿರೋಧಿ ಕ್ರಿಯೆ ಕಾನ್‌ಸೆಪ್ಟ್ ಅಡಗಿದೆ ಎಂದುಕೊಂಡಿದ್ದೇನೆ. ತೀರ, ತೀರ ಸರಳವಾಗಿ ಹೇಳುವದಾದರೆ ತನಗೆ ಹಾಗು ತಮಗೆ ಒಪ್ಪಿಗೆ-ಸಮ್ಮತ ಎನ್ನಬಹುದೇ ? ಆದದ್ದನ್ನ, ಜನ-ಪರ ಎಂದೂ ಆಗದೇ ಇದ್ದುದನ್ನು ಜನ–ವಿರೋಧಿ ಎಂದು ಮೌಲ್ಯೀಕರಣ-ಮೌಲ್ಯ ಮಾಪನ ಮಾಡಲಾಗುತ್ತದೆ. ಇದು ಏಕೆ ? ಹೇಗೆ ? ಎಂದು ಪ್ರಶ್ನಿಸಿದಾಗ ಹೊರ

ದುವ್ಯ ಸತ್ಯ ಮಾತ್ರ ಮರ್ಮ ಭೇದಕವಾಗಿರಲೂ ಸಾಕು. ನಮ್ಮೆಲ್ಲರ ಹುಟ್ಟು ಅಲ್ಲಿಂದಲೇ ಎಂದರೆ ಅಶ್ಲೀಲವಲ್ಲ, ಸಾಮಾಜಿಕ ಸತ್ಯ-ಪ್ರಕೃತಿ ಸತ್ಯ ಎಂದು ತಿಳಿಯುತ್ತೇನೆ.

ಕೆ. ವಿ. ನಾರಾಯಣ ಅವರು ಅನ್ನುವಂತೆ, ಒಂದು ಕಾಲ, ಕಾಲದ ಒಂದು ಜನ ಅಂದರೆ ತಂಡ ಒಂದು ಕೃತಿಯನ್ನು ಚರ್ಚಿಸುವ ಮೂಲಕ, ಆ ಕಾಲದ ಮೌಲ್ಯ ಏನೆಂದು ನಿರ್ಧರಿಸುತ್ತೆ. ಆ ನೆಲೆಯಲ್ಲಿಯೇ ಇನ್ನೊಂದರ ಬಗ್ಗೆ ಉಪೇಕ್ಷೆ-ತಾತ್ಸಾರ, ವಿರೋಧವನ್ನು ವ್ಯಕ್ತಪಡಿಸುತ್ತದೆ. ಈ ಕ್ರಿಯೆಯೇ ಒಂದು ರೀತಿ ಮೌಲ್ಯ ಮಾಪನ ಮಾಡಿದಂತೆ. ನಿಜ. ಈ ಅಭಿಪ್ರಾಯ ನಾನೂ ಒಪ್ಪುತ್ತೇನೆ, ಆದರೆ, ಅದು ಹೀಗೆಯೇ ಅಥವಾ ಹಾಗೆಯೇ ನಡೆಯುತ್ತಲ್ಲಾ ಏಕೆ ? ಅದರ ಆ ವ್ಯವಸ್ಥೆಯ ರಚನೆ ಹೇಗೆ ? ಆ ನೆಲೆಯ ಕ್ರಿಯೆಯ ಪ್ರಾಮಾಣಿಕತೆ ಎಷ್ಟು ? ಗಟ್ಟಿ ಎಷ್ಟು ? ಎಂದು ಪ್ರಶ್ನಿಸದೆ ಹೋದರೆ, ನಮ್ಮ ಅಥವಾ ನನ್ನ ಪ್ರಾಮಾಣಿಕತೆ–ಗಟ್ಟಿತನ ಎಷ್ಟು ಸಾಚಾ ? ವಿರೋಧವಿದ್ದರೂ ಪ್ರತಿಕ್ರಿಯಿಸಲಾಗದ ಸ್ಥಿತಿಯನ್ನೇ, ವಿರೋಧಿಗಳು ಸಮ್ಮತಿ ಎಂದು ತಿಳಿದು ಬಂದದ್ದರಿಂದಲೇ, ಅಂತಹ ಸ್ಥಿತಿಯಲ್ಲಿ ಮಾನವ–ಜನಾಂಗ ಇರುವುದರಿಂದಲೇ ಮೌಲ್ಯೀಕರಣ–ಮೌಲ್ಯಮಾಪನವನ್ನು ಒಂದು 'ಚಾನ್ಸ್'ಯ ತನವಾಗಿ ಸದ್ಯಕ್ಕೆ ಪರಿಗಣಿಸಬೇಕಾಗುತ್ತದೆ.

ಉದಾಹರಣೆಗೆ : ಒಂದು ಕೃತಿ, ಓಬ್ಬ ಕೃತಿಕಾರ ಆ ಕಾಲ ಮಾನದಲ್ಲಿ ಉಪೇಕ್ಷೆಗೆ ಒಳಗಾಗಿದ್ದು, ತಿರಸ್ಕಾರಕ್ಕೆ ಒಳಗಾಗಿದ್ದು, ಮುಂದಿನ ಕಾಲಮಾನದಲ್ಲಿ ಮರುಜನ್ಮ ಎತ್ತಿದಂತೆ ಹುಟ್ಟು ಪಡೆಯುವುದು, ಶ್ರೇಷ್ಠನೂ ಆಗಿಬಿಡುವುದು ಇದೆಯಲ್ಲಾ; ಈ ಪ್ರಕ್ರಿಯೆಯ ಪರಿವ್ಯಾಪ್ತಿ, ಹಣೇಬರಹದ ರಹಸ್ಯ ಏನು ?

ಇದನ್ನೇ ಅಂದರೆ, ಈ ಬಗೆಯ ಪ್ರಕ್ರಿಯೆಯನ್ನೇ ನಾನು ಜನ-ಪರ, ಜನ–ವಿರೋಧಿ ಎಂದು ಗುರುತಿಸಲು ಬಯಸುತ್ತಾ ಇದ್ದೇನೆ.

ಇವತ್ತಿನ ನನ್ನ ವಿಷಯ–ವಸ್ತುವನ್ನೇ ಉದಾಹರಣೆಯಾಗಿ, ಉಪಾಹಾರವಾಗಿ ತೆಗೆದುಕೊಳ್ಳಬಹುದು.

ಕನ್ನಡದ ಸಣ್ಣ ಕತೆಗಳ ಮಾಧ್ಯಮವನ್ನು, ತಮ್ಮ, ಸಂಪೂರ್ಣ ಹಾಗೂ ನಿರಂತರ ಅಭಿವ್ಯಕ್ತಿ ಮಾಧ್ಯಮವಾಗಿ ತೆತೆದುಕೊಂಡವರು ಮಾಸ್ತಿಯವರು ಎಂದೂ, ಅವರು ಬರೆದದ್ದೆಲ್ಲಾ ಶ್ರೇಷ್ಠ–ಪರಿಪೂರ್ಣ ಎಂದೂ ಅನ್ನುವವರು ಆವಾಗಲೂ ಇದ್ದಾರೆ ಈಗಲೂ ಇದ್ದಾರೆ. ಯು. ಆರ್. ಅನಂತಮೂರ್ತಿಯವರು ಬರುವವರೆಗೆ ಮಾಸ್ತಿಯವರೇ ಶ್ರೇಷ್ಠರು, ಏಕ್ಕವರೆಲ್ಲಾ 'ಮಾಸ್ತಿ ಪರಂಪರೆ'ಯ ಕೇವಲ ಹಿಂಬಾಲಕರು ಎಂದೇ ತೀರ್ಮಾನಿಸಿದ್ದಾರೆ. ಮೌಲ್ಯೀಕರಣ ನಡೆದು ಹೋಗಿದೆ.

ಹೀಗನ್ನುವವರೇ ಇನ್ನೊಂದು ಮಗ್ಗಲಿಗೆ ಒಂದು ಸಿದ್ಧಾಂತ ಮಂಡಿಸಿದ್ದಾರೆ: ಬರೆದ ಕೃತಿಗಳ ಸಂಖ್ಯೆ ಇತ್ಯಾದಿಗಿಂತ, ಕೇವಲ ಕೃತಿ ಮುಖ್ಯ. ಉದಾಹರಣೆಗೆ- 'ತಬ್ಬಲಿಗಳು' ಕತೆಯನ್ನು, ರಾಘವೇಂದ್ರ ಖಾಸನೀಸರನ್ನು, ತಾವಾಗಿಯೇ ಯಾವ ತಗಾದೆಗೆ ಇಳಿಯದ ಸ್ಥಿತಿಯಲ್ಲಿರುವ ಮನುಷ್ಯರೆಂದು, ತೆಗೆದುಕೊಳ್ಳೋಣ. ಅವರ ಮಿಕ್ಕ ೩-೪ ಕತೆಗಳ ಮಾತಿರಲಿ. 'ತಬ್ಬಲಿಗಳು' ಕನ್ನಡದ ಕೆಲವೇ ಶ್ರೇಷ್ಠ ಕತೆಗಳಲ್ಲಿ ಒಂದು ಎಂದು ಒಪ್ಪಿತವಾಗಿದೆ. ಸಣ್ಣ ಕತೆಯ ಮಾಧ್ಯಮ ಬಿಟ್ಟು ಬೇರೆ ಮಾಧ್ಯಮಕ್ಕೆ ಖಾಸನೀಸರು ಕೈ ಹಾಕಿದವರಲ್ಲ. ಸಣ್ಣ ಕತೆಯನ್ನಂತೂ ಬಹಳ ಬರೆಯಲಿಲ್ಲ. ಆದರೆ 'ತಬ್ಬಲಿಗಳು' ದೇವನೂರ ಮಹಾದೇವರ ಅಭಿಪ್ರಾಯದಲ್ಲಿ ಹೇಳುವುದಾದರೆ, ಸಣ್ಣ ಕತೆಯಾಗಲು ಏನೆಲ್ಲಾ ಎಷ್ಟೆಲ್ಲಾ ಸೂರೆಗೊಳ್ಳಬಹುದೋ ಹಾಗೆ ಸೂರೆಗೊಂಡ ಕತೆ ಅದು. ('ತಬ್ಬಲಿಗಳು' ಬಗ್ಗೆ ನನ್ನ ಅಭಿಪ್ರಾಯ ಇಲ್ಲಿ ಹೇಳುತ್ತಿಲ್ಲ ಎಂಬುದು ಗಮನದಲ್ಲಿ ಇರಲಿ.)

ಹೀಗೆ, ಅಂದರೆ, ಖಾಸನೀಸರಂತೆ ಹೆಚ್ಚು ಬರೆಯದ, ಆದರೂ ಸಣ್ಣ ಕತೆಯ ನಿರ್ಮಾಣ ಮಾಡಿದ, ಗಂಭೀರವಾಗಿಯೇ ಆ ಮಾಧ್ಯಮವನ್ನು ಸ್ವೀಕರಿಸಿದ ಕತೆಗಾರರು ಮಾಸ್ತಿಯವರ ಕಾಲದಲ್ಲಿಯೇ ಇದ್ದರು. ಅವರ ತಲೆಮಾರಿನವರೇ ಆಗಿದ್ದರು. "ನಂದಾದೀಪ" ಕತಾಸಂಕಲನದ ಕೊರಡ್ಕಲ್ ಶ್ರೀನಿವಾಸರಾವ್ ಅವರು.

ಬಹುಶಃ ಗಿರಡ್ಡಿ ಗೋವಿಂದರಾಜರು ಮೊಟ್ಟಮೊದಲಿಗೆ ಹಾಗೂ ಇತ್ತೀಚೆಗೆ, ಶ್ರೀನಿವಾಸರಾಯರ "ಧನಿಕರ ಸತ್ಯನಾರಾಯಣ" ಕತೆಯನ್ನು ಸಂಶೋಧನೆಯೋ ಅನ್ನುವಂತೆ ಹೊರತೆಗೆದು, ಚರ್ಚೆ ಪ್ರಾರಂಭಿಸುವವರೆಗೆ, ಅವರ ಬಗ್ಗೆ, ಆ ಕೃತಿಯ ಬಗ್ಗೆ ನಮ್ಮ ಗಮನ ಏಕೆ ಹೋಗಲಿಲ್ಲ?

ಮಾಸ್ತಿಯವರ 'ಕಲ್ಮಾಡಿಯ ಕೋಣ' ಎಂಬ ಸಾಮಾಜಿಕ ಕತೆಯಿಂದ ಹಿಡಿದು, ಅವರ ಒಟ್ಟು ೧೦೦ ಕತೆಗಳಲ್ಲಿ ಯಾವ ಕತೆಗೂ, 'ಧನಿಕರ ಸತ್ಯನಾರಾಯಣ' ಕತೆಯಂತೆ, ಸಮಕಾಲೀನ ಅಥವಾ ಇಂದಿಗೂ ಉಳಿದಿರುವ ವರ್ಗ-ವರ್ಣ ಹೋರಾಟವನ್ನು ಚಿತ್ರಿಸುವ, ಮನುಷ್ಯನನ್ನೇ ಕಿತ್ತು ತಿನ್ನುವ, ಹೀಗಾಗಿ ತಿರುಗಿಬೀಳುವ, ಆದರೂ ಕಾವ್ಯಮೀಮಾಂಸೆಯ ಧ್ವನಿ ಪೂರ್ಣತೆಗೆ ಊನವಾಗದೆ ಕಡೆಯಲಾಗಲಿಲ್ಲ? 'ಧನಿಕರ ಸತ್ಯನಾರಾಯಣ'ನನ್ನು, ಚಾರಿತ್ರಿಕವಾಗಿ, ಆ ಕಾಲಗರ್ಭದ ವ್ಯವಸ್ಥೆಯಲ್ಲಿಟ್ಟು ಗಂಭೀರವಾಗಿ ಅಧ್ಯಯನ ಮಾಡದೇ ಹೋದರೆ, ಕುವೆಂಪು ಅವರ 'ಧನ್ವಂತರಿಯ ಚಿಕಿತ್ಸೆ', ಆ ಮೇಲೆ ಸ್ವಾತಂತ್ರ್ಯಾನಂತರ ಕಾಣಿಸಿಕೊಂಡ ಲಂಕೇಶರ 'ರೊಟ್ಟಿ' ಕತೆಗಳು, ನಮಗೆ ವಿಚಿತ್ರ ಅರ್ಥಧಾರಣೆಗೆ ಕಾರಣವಾಗಿಬಿಡುತ್ತವೆ.

ಹೀಗೆಯೇ, ಇವತ್ತಿನ ಬಂಡಾಯ-ದಲಿತ ಕತೆಗಳನ್ನು ಗಂಭೀರ ಅಧ್ಯಯನಕ್ಕೆ ಎತ್ತಿಕೊಳ್ಳುವಾಗಲೂ ಚಾರಿತ್ರಿಕವಾಗಿ ಪಂಡಿತ ತಾರಾನಾಥರ 'ದೇವರ ಮಗು'

'ಸಮಾಧಾನವೊ?' ಆರ್. ಕಲ್ಯಾಣಮ್ಮನವರ 'ದೇವನೆಲ್ಲಿ' ಮುದವೀಡು ಕೃಷ್ಣರಾಯರ 'ರಾಯರ ಮೃತ್ಯುಪತ್ರ'– ಕತೆಗಳನ್ನೂ ಪರಿಶೀಲಿಸಬೇಕಾಗುತ್ತದೆ. ಅಷ್ಟೇ ಏಕೆ, ಅನಂತಮೂರ್ತಿಯವರು ಮಾಸ್ತಿಯವರ ನಂತರ ಕಥಾಮಾಧ್ಯಮವನ್ನು ವಿಸ್ತರಿಸಿದರು ಎನ್ನುವಾಗ ಕೂಡಾ, 'ಘಟಶ್ರಾದ್ಧ'ದಂತಹ ಕತೆಗಳಿಗೂ, ಪಂಡಿತ ತಾರಾನಾಥರ ಕತೆಗಳಿಗೂ ಇರುವ ಸಂಬಂಧ–ಅಂತರವನ್ನು. ಯಾವುದು ನಿಜವಾಗಿಯೂ ಕಾಲಗರ್ಭದಿಂದ ಎದೆಸೀಳಿ ಮೈದಾಳಿರುವಂತಹದ್ದು ಎಂಬುದನ್ನು ಚರ್ಚೆಗೆ ಒಡ್ಡಬೇಕಾಗುತ್ತದೆ.

ಸಮಕಾಲೀನ ಸಾಮಾಜಿಕ ವಸ್ತುವನ್ನು ಕೈಗೆತ್ತಿಕೊಂಡು, ಆಗ ತಾನೇ ವಿದೇಶದಿಂದ ಆಮದಾಗಿದ್ದ ಮಾಧ್ಯಮವನ್ನು ದೇಸೀಯವಾಗಿ ರೂಪಿಸಲು ಪ್ರಯತ್ನಿಸಿದವರಲ್ಲಿ ಪಂಡಿತ ತಾರಾನಾಥ, ಆರ್. ಕಲ್ಯಾಣಮ್ಮ, ಮುದವೀಡು ಕೃಷ್ಣರಾಯರು ಮುಖ್ಯರು. ಇವತ್ತಿನವರೆಗೆ ಇವರ, ಇಂತಹವರ ಕೃತಿಗಳು ಚರ್ಚೆಗೇ ಒಳಗಾಗಿಲ್ಲ ಏಕೆ? ಮೌನ ಮೌಲೀಕರಣದಿಂದಲೇ ಇಂದು ಆ ಕೃತಿಗಳ ಬಗ್ಗೆ ನಾವೂ ಮೌನ ವಹಿಸಬೇಕೇ?

ಕೇವಲ ಭಾಷೆ. ತಂತ್ರ. ಶಿಲ್ಪ. ಬಂಧ, ರಚನೆ, ಪಾತ್ರ ವಿಶ್ಲೇಷಣೆ, ಧ್ವನಿ, ಪ್ರತಿಮೆ- ಈ ಬಗೆಯ ಬೇಕು ಬೇಡದ ಅಸ್ತ್ರಗಳ ಹಿನ್ನೆಲೆ–ಪರಿಣಾಮದ ಮೇಲೆಯೂ ಹೇಳುವುದಾದರೆ, ಓದುವ ವರ್ಗ ಎಲ್ಲೋ ಬರೆಯುವವನನ್ನು ನಿಯಂತ್ರಿಸುತ್ತಿರುತ್ತದೆ ಎಂದೇ ನನ್ನ ಭಾವನೆ. ಈ ವರ್ಗ ತುಂಬಾ ಕಡಿಮೆಯೇ ಇರುತ್ತದೆ. ಮಾತ್ರವಲ್ಲ. ಎ.ಕೆ. ರಾಮಾನುಜಮ್ ಅಂತಹವರ ಕಾವ್ಯ ಪ್ರೇಮಿಗಳು ಕನ್ನಡದಲ್ಲಿ ಒಂದು ಕೈ ಬೆರಳುಗಳಿಗಿಂತ ಹೆಚ್ಚಿರಲಾರರು ಎನ್ನುವಾಗ, ವಸ್ತುಸ್ಥಿತಿ ಹೇಳುತ್ತಿದ್ದೇನೆಯೇ ಹೊರತು, ಕವಿಯನ್ನು ಅಪಹಾಸ್ಯ ಮಾಡುತ್ತಿಲ್ಲ. ಅಂದರೆ ಕಲಾಭಿಮಾನಿಗಳು, ಕಲೆ–ಕಲಾವಿದರ ನಡುವೆ ನಿಂತು, ಸೂತ್ರದ ಬೊಂಬೆಯಂತೆ ಆಡಿಸುತ್ತಿದ್ದಾರಷ್ಟೇ? ಈ ಬಗೆಯ ಕಲಾಭಿಮಾನಿಗಳನ್ನು, ಅಲ್ಪ ಸಂಖ್ಯಾತ ಓದುಗ ವರ್ಗವನ್ನು ಪರಿಗಣನೆಗೆ ತೆಗೆದುಕೊಳ್ಳದೇ ಹೋದಂತಹ ಕಲಾವಿದರು ಸಹಜವಾಗಿ ಮೌಲೀಕರಣದ ಮೌನಕ್ಕೆ ಗುರಿಯಾಗಬೇಕಾಗುತ್ತದೆ.

ಪಂಡಿತ ತಾರಾನಾಥ, ಆರ್. ಕಲ್ಯಾಣಮ್ಮ, ಮುದವೀಡು ಕೃಷ್ಣರಾಯರು ಕೇವಲ ಮೂರು ಪ್ರಾದೇಶಿಕ ಸಂಸ್ಕೃತಿಯ ಪ್ರತಿನಿಧಿಗಳು ಮಾತ್ರವೇ ಅಲ್ಲ, ಮೂರು ವಿಭಿನ್ನ ಜೀವನಾನುಭವ ವಲಯದ ಮಾದರಿಗಳು ಕೂಡಾ ಎಂಬುದು ಕಲೆಯ ದೃಷ್ಟಿಯಿಂದ ಮಹತ್ತ್ವದ ಸಂಗತಿ. ಮೂಲತಃ ವೈದ್ಯ, ವಿಚಾರವಾದಿ, ಶಿಕ್ಷಣ ತಜ್ಞರಾದ ಪಂಡಿತ ತಾರಾನಾಥರು, ಹಲವು ಸಂಘ ಸಂಸ್ಥೆಗಳ ಸ್ಥಾಪಕಿ, ನಗರ ಸಭೆಯ ಸದಸ್ಯೆ, ಬೆಂಚ್ ನ್ಯಾಯಾಧೀಶೆ, ಪತ್ರಿಕೋದ್ಯಮಿಯಾದ ಆರ್. ಕಲ್ಯಾಣಮ್ಮನವರು, ವಕೀಲರು ಸ್ವಾತಂತ್ರ್ಯ ಹೋರಾಟಗಾರರಾದ ಮುದವೀಡು ಕೃಷ್ಣ

ರಾಯರು–ಸಣ್ಣಕತೆಯ ಮಾಧ್ಯಮವನ್ನು ತಮಾಷೆಗೆ, ಪ್ರಯೋಗಕ್ಕೆ, ಹೆಸರಿನ ಹಿರಿಮೆಗೆ ಬಳಸಿಕೊಳ್ಳುವ ಅಗತ್ಯ, ಪ್ರಮೇಯವೇ ಇಲ್ಲ. ಆವರೆಗಿನ ಆವತ್ತಿನ ಸಾಹಿತ್ಯ–ಸಾಹಿತಿಗಳ ಒಡನಾಟ ಇಟ್ಟುಕೊಂಡೇ, ಆ ಕ್ಷೇತ್ರ ಪ್ರವೇಶಿಸಿದವರು ಅವರು. ಘೋಷಿಸಿಕೊಳ್ಳದಿದ್ದರೂ ಪ್ರಗತಿಶೀಲ ಚಳುವಳಿ, ಸ್ತ್ರೀ ವಿಮೋಚನಾ ಚಳುವಳಿ, ಮೌಲ್ಯಾಧಾರಿತ ರಾಜಕೀಯ ಹೋರಾಟಗಳ ನಾಯಕಮಣಿಗಳೇ ಇವ ರಾಗಿದ್ದರೂ ಎಂಬುದು ಚಾರಿತ್ರಿಕ ಸತ್ಯ. ಇಷ್ಟೆಲ್ಲ ವಿವರಿಸಿ ಹೇಳುವ ಉದ್ದೇಶ ಇಷ್ಟೆ; ಅವತ್ತಿನ ಸಾಮಾಜಿಕ ಸಮಸ್ಯೆ, ಹೋರಾಟಗಳ ನಡುವೆಯೇ ನಿಂತು, ಈ ಬಗೆಯ ಲೇಖಕರು ಕೈಗೊಂಡ ರಚನೆಗಳು ವಸ್ತು ಸ್ಥಿತಿಗೆ, ವಸ್ತು ಪರಿಣಾಮಕ್ಕೆ ಹೆಚ್ಚು ಮಹತ್ವ ಕೊಡುವುದರಲ್ಲಿ-ವಹಿಸುವುದರಲ್ಲಿ ಮಹತ್ತ್ವದ ಪಾತ್ರವಿದೆ.

ಧಾರ್ಮಿಕ ನಂಬುಗೆಯ ಮೇಲೆ, ವೈಯಕ್ತಿಕ ವಿಶ್ವಾಸದ ಮೇಲೆ, ಕಲಾತ್ಮಕ ಚಿತ್ರಣಕ್ಕೆ ಪ್ರಾಧಾನ್ಯ ಕೊಟ್ಟ ಮಾಸ್ತಿ, ಆನಂದ ಅಂತಹ ಲೇಖಕರು. ಯಾವ ಕಾಲಮಾನ ವನ್ನು ತಮ್ಮ ಕೃತಿರಚನೆಯಲ್ಲಿ ತರಲು ಬಯಸಿದ್ದರು ? ಅಥವಾ ಯಾವ ಸಮಾಜದ ಗತಿಶೀಲತೆಯನ್ನು ಗುರುತಿಸಲು ಹೊರಟಿದ್ದರು ? "ನಾನು ಕೊಂದ ಹುಡುಗಿ" ಯಲ್ಲಿ ದೇವದಾಸಿ ಚೆನ್ನಿ 'ಆತ್ಮಹತ್ಯೆ' ಮಾಡಿಕೊಂಡದ್ದೇ ಅಂದಿನ ಸಮಾಜದ ಮುನ್ನ ಡೆಯೆ ? ಅಥವಾ ಅದು ಕಥೆಗಾರನ ಸಾತ್ವಿಕ ಕ್ರೋಧದ ಹಿಂದೂ ಪ್ರತಿಕ್ರಿಯೆಯೊ ? ಮಾಸ್ತಿಯವರ "ವೆಂಕಟಿಗನ ಹೆಂಡತಿ"ಯಲ್ಲಿ ವೆಂಕಟಿಗ ಸ್ಥಿತಪ್ರಜ್ಞನಂತೆ, ಮಹಾತ್ಮ ನಂತೆ, ಧಾರ್ಮಿಕ ಪುರುಷನಂತೆ ಉಳಿಯುವಲ್ಲಿಯೇ ಕತೆಗಾರನ ಮೌನಧ್ವನಿ ಪ್ರತಿರ ಣನಗೊಳ್ಳುವುದು ಕೇವಲ ಕಲಾತ್ಮಕತೆಯ ಸಿದ್ಧಿ–ತಪಸ್ಸು ಎನ್ನಲಾದೀತೆ ?

ಸಾಹಿತಿ ಕಲಾವಿದರು ಕೂಡಾ ಈ ಸಮಾಜದಲ್ಲಿಯೇ ಹುಟ್ಟಿ ಬೆಳೆದವರಾದ್ದರಿಂದ, ಅವರು ಎಷ್ಟೇ ವೈಯಕ್ತಿಕ ನಂಬುಗೆಯ, ತಮ್ಮ ಧರ್ಮ ಮೌಲ್ಯಗಳ ಪ್ರತಿಷ್ಠಾಪನೆ ಕೈಗೊಳ್ಳಲು ಪ್ರಯತ್ನಿಸಿದರೂ, ತತ್ಕಾಲೀನ ಅಥವಾ ಕಲಾತ್ಮಕ ಯಶಸ್ಸು ದೊರಕಿ ದರೂ, ಸಮಾಜದ ದಿಕ್ಕು–ನಡೆ–ವೇಗ ತನ್ನದೇ ಆಗಿರುತ್ತದಷ್ಟೆ ? ಹಿಂದೆ ಬಿದ್ದ ವರು ಫರ್ಲಾಂಗು-ಮೈಲಿಗಲ್ಲುಗಳಾಗಿ ನಿಲ್ಲುತ್ತಾರೆ ನಿಜ. ಆದರೆ ಸಮಾಜದ ಪರಿ ಣಾಮದೊಂದಿಗೆ ಹೆಜ್ಜೆ ಹಾಕಲಾರದಂತಹವರ ಬದುಕು ಬರಹವನ್ನು ಜನ–ವಿರೋಧಿ ಎಂದರೆ ತಪ್ಪೇನು ? ಭಾರತೀಯ ಕಾವ್ಯ ಮೀಮಾಂಸೆಯಲ್ಲಿ, ಕವಿ-ಕ್ರಾಂತಿದರ್ಶಿ, ಮುಂದಾಗುವುದನ್ನು ಕಾಣುವವ ಎಂದು ಅರ್ಥ ಹೇಳುತ್ತಾರೆ. ವೇದದಲ್ಲಿಯೇ. ಸದ್ಯಕ್ಕೆ ಮುಂದಿನ ಮಾತು ಹಾಗಿರಲಿ; ತನ್ನ ಕಾಲವನ್ನೇ ಪ್ರತಿನಿಧಿಸಿದರೆ ನಮ್ಮ ಪುಣ್ಯ ಎನ್ನಬೇಕಾಗಿದೆ. ಸಾಮಾನ್ಯವಾಗಿ ತನ್ನ ಪ್ರಾಚೀನ ಕಾಲವನ್ನೇ ಪುನರ್ ಸೃಷ್ಟಿ ಸಲು ಹೊರಡುವುದೇ ಕನ್ನಡದ ಈ ವರೆಗಿನ ಸಾಧನೆ. ವಿದೇಶದ ಅನ್ಯಜ್ಞಾನ ಶಿಸ್ತಾದ ಮನಶ್ಶಾಸ್ತ್ರದಲ್ಲಿ, ಸೃಷ್ಟಿಶೀಲರೆಲ್ಲಾ ತಮ್ಮ ತಮ್ಮ ಬಾಲ್ಯಕ್ಕೆ ಮರಳುವುದು, ಬಾಲ್ಯದ ಅನುಭವದ ಆಧಾರದ ಮೇಲೆ ವಸ್ತು ಸ್ಥಿತಿಗೆ ಪ್ರತಿಕ್ರಮಿಸುವುದು

ಆಧುನಿಕ ಸತ್ಯ. ಹೀಗಾಗಿ ಭಾರತದ ಪ್ರಾಚೀನ ಸತ್ಯ-ವಿದೇಶದ ಆಧುನಿಕ ಸತ್ಯದ ನಡುವೆ ಬದುಕಿನ ವಾಸ್ತವ ಸತ್ಯ 'ಮಿಸ್ಸಿಂಗ್ ಲಿಂಕ್' ಆಗಿ ಹುದುಗಿರಬೇಕಲ್ಲವೆ ?

'ಪ್ರೇಮ'ವೇ ಪವಿತ್ರ-ಶ್ರೇಷ್ಠ ಎಂದು ಆಶ್ರಮ ಕಟ್ಟಿ ನಿಂತ ಪಂಡಿತ ತಾರಾನಾಥರು, ಪ್ರೇಮಕ್ಕೂ ಮಿಗಿಲಾದದ್ದು ಯೌವನ-ದೈಹಿಕ ಆಸೆ-ಆಕಾಂಕ್ಷೆಗಳು ಎಂಬುದನ್ನು ತಮ್ಮ 'ದೇವರ ಮಗು' ಕತೆಯಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಈ ಚಿತ್ರಣ ದಲ್ಲಿಯೂ ಎಂತಹ ಕಲಾತ್ಮಕತೆ ತೋರಿದ್ದಾರೆ, ಓದುಗನ ಹೃದಯ ಸಂಸ್ಕಾರಕ್ಕೆ ಆ ಪರಿಣಾಮ ತಂದುಕೊಟ್ಟಿದ್ದಾರೆ ಎಂಬುದಕ್ಕೆ. ಮಗ-ವಕೀಲ ಬಲವಂತ, ತನ ತಾಯಿ ರಾಧಾಬಾಯಿ, ತನ್ನ ಹೆಂಡತಿಯ ತಂದೆ ಅಂದರೆ ಮಾವನೊಂದಿಗೆ ದೈಹಿಕ ಸಂಬಂಧ ಇಟ್ಟುಕೊಂಡಿರುವ ಘಟನೆ ಕಂಡಮೇಲೆ ನಡೆದುಕೊಂಡ ರೀತಿ, ಕೊನೆಗೆ ಯೌವ್ವನ ವಿಧವೆ ರಾಧಾಬಾಯಿ ಅನೈತಿಕ ಸಂಬಂಧದಿಂದ ಗರ್ಭಧರಿಸಿ, ಪತ್ರದ ಮುಖೇಣ ಅದೇ ಮಗನ ವಿಧವೆ ಸೊಸೆ ತುಂಗಮ್ಮನಿಗೆ ತನ್ನ ಸ್ಥಿತಿ ವಿವರಿಸಿ, ಗರ್ಭ ದಲ್ಲಿರುವ ಮಗುವನ್ನು ಸತ್ತಮಗ ಬಲವಂತನೇ ಎನ್ನುವ ಪರಿಣಾಮಕಾರಿ ಚಿತ್ರ-ಈ ಶತಮಾನದ ಮೂರನೇ ದಶಕದಲ್ಲಿ ಕನ್ನಡದಲ್ಲಿ ಪ್ರಕಟವಾದ ಸೃಜನಶೀಲತೆಯ ಹಿರಿಮೆ ಎಂಬುದು ಮೌನಮೌಲೀಕರಣದಲ್ಲಿ ಮರೆಯಾಗಲು ಬೇರೆ ಕಾರಣ ಏನೂ ಬೇಕಿಲ್ಲವಷ್ಟೇ. ವಸ್ತು ಸ್ಥಿತಿ, ರಚನಾ ಪರಿಣಾಮ ಸಮಕಾಲೀನ ಸಮಾಜಕ್ಕೆ ವಿರೋಧ ವಾದಾಗ, ಗತಿಶೀಲ ಸಮಾಜದ ಪರವಾಗಿದ್ದರೂ ಅಲಕ್ಷಕ್ಕೆ ತುತ್ತಾಗಬೇಕಾಯಿತು,

ಹಿಂದೂ ಕೌಟುಂಬಿಕ ಸಂಸ್ಕೃತಿಯ ಚೌಕಟ್ಟಿನಲ್ಲಿಯೇ, ಹೆಣ್ಣು ಬದುಕುವುದು ಚೆನ್ನ ಎಂದು ನಂಬಿದ್ದ ಆರ್. ಕಲ್ಯಾಣಮ್ಮ ಅವರು, "ದೇವನೆಲ್ಲಿ ?" ಎಂಬ ತಮ್ಮ ಕತೆ ಯಲ್ಲಿ ಎತ್ತುವ ಪ್ರಶ್ನೆ ಆರೇಳು ದಶಕದ ಪ್ರಶ್ನೆ ಮಾತ್ರವೇ ಅಲ್ಲ, ಇಂದಿಗೂ ನನ್ನ ಮುಂದೆ ಇರುವ ಭೂತ ಸಮಸ್ಯೆಯೇ ಆಗಿದೆ. ಉತ್ತಮ ಕುಲದ ವನಿತೆಯೊಬ್ಬಳು ನೀರಿನಲ್ಲಿ ಮುಳುಗುತ್ತಿದ್ದಾಗ, ಕಾಪಾಡಲು ಹೋದ ಮಾದಿಗರ ಬೀರ, ಹೆಂಡತಿ ಚೆನ್ನಿ-ಮಗುವನ್ನು ಬಿಟ್ಟು ಪ್ರಾಣ ನೀಡಬೇಕಾಗುತ್ತದೆ. ೪ ವರ್ಷಗಳ ನಂತರ, ಮಗುವಿಗೆ ಜ್ವರ ಬಂದು ತತ್ತರಿಸುವಾಗ ಕನಸಿನಲ್ಲಿ ಬಂದ ಬೀರ 'ಔಷಧಿ ಬೇಡ; ದೇವಾಲಯಕ್ಕೆ ಕರೆದು ಹೋಗು ಹುಷಾರಾಗುತ್ತದೆ' ಎನ್ನುತ್ತಾನೆ. ಅಂತೆಯೇ ಚೆನ್ನಿ ದೇವಾಲಯಕ್ಕೆ ಹೋದಾಗ, ಅಲ್ಲಿಯ ಪೂಜಾರಿ ಆನಂತರ ಗ್ರಾಮದ ಹೆಗ್ಗಡೆ, ಊರ ಜನಗಳ ಹಿಂಸೆಗೆ ಗುರಿಯಾಗಿ ಮಗುವೂ ಸತ್ತು ತಾನೂ ಹುಚ್ಚಿಯಾಗಿ ಎಲ್ಲೋ ಕಣ್ಮರೆಯಾಗಬೇಕಾಗುತ್ತದೆ. ಇವೆಲ್ಲಕ್ಕೂ ಕಾರಣವಾದ ದೇವಾಲಯ ದೇವರನ್ನೇ ಚೆನ್ನಿ ಪ್ರಶ್ನಿಸುತ್ತಾಳೆ. ಆ ಪ್ರಶ್ನೆ ಮಾದಿಗರ- ಅವರ ಕೇರಿಯ ಪ್ರಶ್ನೆಯಾಗಿಯೇ ನಿಲ್ಲುತ್ತದೆ. ಇಲ್ಲಿಯೂ ಅಷ್ಟೆ, ಪಂಡಿತ ತಾರಾನಾಥರು ಹೇಗೆ ಜೀವನವಿಡೀ ಪ್ರೇಮವೇ ಶ್ರೇಷ್ಠ ಎಂದು ಆರಾಧಿಸಿದರೂ ದೈಹಿಕ ಸೆಳೆತ, ಬದುಕಿನ ಕಾಲಮಾನ ಎಷ್ಟು ಪ್ರಬಲ

ಎಂಬುದನ್ನು ಚಿತ್ರಿಸಲು ಕೃತಿ ಅನುವಾಯಿತೋ ಅಂತೆಯೇ, ಹೆಣ್ಣು ಕೌಟುಂಬಿಕ ಜೀವನದ ಚೌಕಟ್ಟಿನಲ್ಲಿಯೇ ಬದುಕು ನಡೆಸಬೇಕು ಎಂದು ಹಿಂದೂ ಸಂಪ್ರದಾಯವಾದಿಯಾದ ಆರ್. ಕಲ್ಯಾಣಮ್ಮನವರು ತಮ್ಮ ಸೃಜನಶೀಲ ಕೃತಿಯಲ್ಲಿ, ಹಿಂದೂ ಧರ್ಮದ ಆಧಾರಸ್ತಂಭಗಳಾದ ದೇವಾಲಯ, ದೇವರು, ಮೌಲ್ಯಗಳನ್ನೇ ಬೀದಿಗೆ ಎಳೆದು ಹರಾಜು ಹಾಕುತ್ತಾರೆ. ಇದು ಕಲಾವಿದನನ್ನು ಮೀರಿದ, ಗತಿಶೀಲ ಸಮಾಜದ ಜನಪರ ಧೋರಣೆಯಲ್ಲವೆ ? ತತ್ಕಾಲೀನವಾಗಿ ಮನ್ನಣೆ ಸಿಗದೆ ಇದ್ದರೂ, ಸಮಾಜದ ದಿಕ್ಕು-ನಡೆ-ವೇಗ ತಪ್ಪಿಸಲು ಅಂದಿನ ಓದುಗ–ವಿಮರ್ಶಕರಿಗೆ ಸಾಧ್ಯವಾಯಿತೆ ?

ವೃತ್ತಿಯಿಂದ ವಕೀಲರು, ಸ್ವಾತಂತ್ರ್ಯ ಹೋರಾಟಗಾರರು ಆದ ಮುದವೀಡು ಕೃಷ್ಣರಾಯರು 'ರಾಯರ ಮೃತ್ಯುಪತ್ರ' ಎಂಬ ಕತೆಯಲ್ಲಿ, ಪಂಡಿತ ವಿಶ್ವಂಭರನಾಥ ಸಚ್ಚಿದಾನಂದ ಯೋಗೀಶ್ವರ ಎಂಬ ವಕೀಲನು. ಬಡವರ ಹಣ ಮಾತ್ರವಲ್ಲ ಬದುಕನ್ನೇ ಶೋಷಣೆ ಮಾಡಿ, ಕೊನೆಗೆ ಸಾಯುವ ಕಾಲದಲ್ಲಿ ಪಶ್ಚಾತ್ತಾಪ ಪಡುತ್ತಾ, ಇಡೀ ತನ್ನ ಆಸ್ತಿಯನ್ನು ಹೆಂಡತಿ ಹಾಗು ಒಬ್ಬಳೇ ಮಗಳಿಗೆ ಹಂಚಿ, ಮಿಕ್ಕದ್ದನ್ನು ೩ ಭಾಗ ಮಾಡಿ: ೧ ಭಾಗ ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆಗೆ, ೨ ನೇ ಭಾಗ ಉದ್ಯೋಗ ಶಿಕ್ಷಣ ಶಾಲೆಯ ಸ್ಥಾಪನೆಗೆ, ೩ ನೇ ಭಾಗ ಹಳ್ಳಿಗಳಲ್ಲಿ ಅನೇಕ ಬಗೆಯ ಕೈಗಾರಿಕೆಗಳ ಪುನರುಜ್ಜೀವನಗೊಳಿಸಲಿಕ್ಕೆ ಉಪಯೋಗಿಸಬೇಕೆಂದು ಮೃತ್ಯುಪತ್ರ ಸಿದ್ಧಪಡಿಸುತ್ತಾನೆ. ಅಂತೆಲೇ ಹೆಂಡತಿ ಮಗಳೂ ಕೂಡ ತಂದೆಯ ಕಾರ್ಯ-ರೂಪಕ್ಕೆ ದೇಶ ಕಾರ್ಯಕ್ಕೇ ತಮ್ಮ ಭಾಗದ ಆಸ್ತಿ–ಹಣ ಉಪಯೋಗಿಸಲು ನಿರ್ಧರಿಸುತ್ತಾರೆ. ಸ್ವಾತಂತ್ರ್ಯ ಪೂರ್ವದಲ್ಲಿಯೇ ತಾವು ವಕೀಲರು–ರಾಜಕೀಯ ಧುರಂಧರರೂ ಆಗಿ, ತಮ್ಮ ರಂಗಗಳ ಬಗ್ಗೆಯೇ ತೆರೆದ ಮನಸ್ಸಿನಿಂದ ಜಿಜ್ಞಾಸೆ ನಡೆಸಿ, ದೇಶದ ಮುಂದಿನ ಭವಿಷ್ಯದ ಬಗ್ಗೆ ಮಾರುಗಿದ ಮುದವೀಡು ಕೃಷ್ಣರಾಯರ ಕತೆ, ಆ ಕಾಲಕ್ಕೆ ಮಾತ್ರವೇ ಅಲ್ಲ ಈ ಕಾಲಕ್ಕೂ ಒಪ್ಪಿತವಾಗದ ಪಾತ್ರಕ್ಕೆ ಜನ ವಿರೋಧಿ ಸಾಹಿತ್ಯವಾಗಲು ಸಾಧ್ಯವೇ ? ಹೀಗಾದಾಗ ಜನಪರ-ಜನವಿರೋಧಿ ಸಾಹಿತ್ಯ–ಕಲೆ ಎಂಬುದು ನಾನಾ ನೆಲೆಗಳಿಂದ ನಿರ್ಣೀತವಾಗುತ್ತದೆ ಎಂಬುದೇ ವಸ್ತುಸ್ಥಿತಿಯಲ್ಲವೇ?

ಇಂದಿನ ಕನ್ನಡದ ಸಾಂಸ್ಕೃತಿಕ–ಸಾಮಾಜಿಕ ವಾತಾವರಣ ಹಿಂದಿನಂತಿಲ್ಲ ಎಂದು ತಿಳಿದಿದ್ದೇನೆ. ಬೂಸಾ ಯಾವುದು-ಜನಪರವಾದದ್ದು ಯಾವುದು ಎಂಬುದನ್ನು ನಿರ್ಣಯಿಸುವ ಶಕ್ತಿ ಜನತೆಯಲ್ಲಿ ಹೆಚ್ಚು ಹೆಚ್ಚು ಹೊರಮುಖೀಗೊಳ್ಳುತ್ತಿದೆ ಎಂದು ವಿಶ್ವಾಸದಿಂದ ಹೇಳಬಲ್ಲೆ, ಹೀಗಿರುವಾಗ ಸಮಕಾಲೀನ ಸೃಜನಶೀಲರು ಮತ್ತು ಚಿಂತಕರು ಮೌನ ವಿವೇಕಕ್ಕೆ–ಮೌನಮೌಲೀಕರಣಕ್ಕೆ ಪಕ್ಕಾಗದೆ ಸಾಂಸ್ಕೃತಿಕ ಸಾಮಾಜಿಕ ವಸ್ತುಸ್ಥಿತಿಗೆ ಕಣ್ಣು ಮನಸ್ಸುಗಳನ್ನು ನಿರ್ಭಯವಾಗಿ ತೆರೆದು, ರಚನಾತ್ಮಕ ಜವಾಬ್ದಾರಿಯನ್ನು ಜನತೆಯಲ್ಲಿ ಮೂಡಿಸಬಹುದು. ●

# ನಾ. ಡಿಸೋಜರ ಸಾಹಿತ್ಯ ಸೃಷ್ಟಿ

ವಿಲಿಯಂ

ನಮ್ಮ ಸಾಹಿತ್ಯ ಸಂದರ್ಭದಲ್ಲಿ ನಾ ಡಿಸೋಜರದು ಪ್ರಮುಖ ಹೆಸರು. ಇವರು ರಚಿಸಿರುವ ಸಾಹಿತ್ಯ ಕುರಿತು ಸಾರಾಸಗಟಾಗಿ ಅದರ ಉದ್ದ ಅಗಲ ಆಳ ಎತ್ತರವನ್ನು ಒಮ್ಮೆಲೆ ಅಳತೆ ಮಾಡುವದು ಸುಲಭವೂ ಅಲ್ಲ, ಸಾಧುವೂ ಅಲ್ಲ. ಸುಮಾರು ಮೂವತ್ತೈದು ಕಾದಂಬರಿಗಳು, ಮುನ್ನೂರು ಸಣ್ಣಕತೆಗಳು, ಇಪ್ಪತ್ತು ಮಕ್ಕಳ ಕೃತಿಗಳು, ಹತ್ತು ನಾಟಕಗಳು, ಒಂದೆರಡು ಜಾನಪದ ಸಂಗ್ರಹಗಳು ಮತ್ತು ನೂರಾರು ಬಿಡಿ ಲೇಖನಗಳಲ್ಲಿ ಹರಿದು ಬಂದಿರುವ ಪ್ರಮುಖ ದನಿಗಳನ್ನು ಎತ್ತಿ ತೋರಿಸುವುದು ಅಥವ ಅವುಗಳಲ್ಲಿರುವ ದೀರ್ಘಕಾಲಿಕ ಮೌಲ್ಯಗಳನ್ನು ಗುರುತಿಸುವದಾಗಲಿ ತಿಳಿದಷ್ಟು ಸುಲಭವಲ್ಲ. ವಿಮರ್ಶೆಯು ಯಾವ ಪಾರಿಭಾಷಿಕ ಮಾತುಗಳ ಗೊಡವೆಗೆ ಹೋಗದೆ, ಇವರ ಪ್ರತ್ಯೇಕ ಮೂರು ನೆಲೆಗಳಲ್ಲಿ ಹರಿಯುವ ಸಾಹಿತ್ಯಕ ದ್ರವ್ಯಗಳನ್ನು ಗುರುತಿಸುವದು ಅರ್ಥಪೂರ್ಣವಾದೀತು. ಮೊದಲನೆಯದು ಕ್ರೈಸ್ತ ಜನಾಂಗದ ಹಿನ್ನೆಲೆಯಲ್ಲಿ ಬಂದಿರುವ ಸಾಹಿತ್ಯ, ಎರಡನೆಯದು ಕಲ್ಲು ಮರಳು ಜೆಲ್ಲಿ ಸಿಮೆಂಟ್ ಹಿನ್ನೆಲೆಯಿಂದ ಬಂದಿರುವ ಸಾಹಿತ್ಯ ಮತ್ತು ಮೂರನೆಯದು ಗಿಡಮರ ಬಳ್ಳಿ ಪರಿಸರದ ಸಾಹಿತ್ಯ. ಈ ಪ್ರಮುಖವಾದ ಮೂರು ಭೂಮಿಕೆಗಳಲ್ಲಿ ಡಿಸೋಜ ಮಾಡಿರುವ ಸಾಹಿತ್ಯಿಕ ಚಿಂತನೆ ಅಪಾರ.

ಕ್ರೈಸ್ತ ಬದುಕಿನ ಚೌಕಟ್ಟಿನಿಂದ ಬಂದಿರುವ "ನೆಲೆ" ಕಾದಂಬರಿ ಮತ್ತು ಸುಮಾರು ಎಪ್ಪತ್ತು ಕಥೆಗಳು ಒಟ್ಟು ಐದು ಕಥಾ ಸಂಕಲನದಲ್ಲಿ, ಉಳಿದವು ಅಲ್ಲಲ್ಲಿ ಹತ್ತಾರು ಪತ್ರಿಕೆಗಳಲ್ಲಿ ಬಂದಿವೆ. "ದೇವರ ಕೆಲಸದ ಮನುಷ್ಯ" "ಪಾದರಿಯಾಗುವ ಹುಡುಗ" "ತಿಂಗಳ ಪೂಜಿಗೆ ಬಂದ ಮಗ" "ದೇವರ ಶಿಲುಬೆ ಮನೆಗೆ ಬಂದದ್ದು" "ಪಾದರಿ ಹೆನ್ರಿ ಸಿಂಪಸನ್" "ಬಳುವಳಿ" "ಗೋಪುರದ ಗಂಟೆ ಮತ್ತು ನಾಲಿಗೆ" "ದೇವರ ಇಚ್ಛೆಯೂ ಸೈತಾನನ ಕೈವಾಡವೂ" "ಕೊನೆ" "ಬಣ್ಣ" "ಸಮಾಧಿ"

"ಪಿಟೀಲು" "ಅರಿಯದವರು"–ಇಂತಹ ಹತ್ತಾರು ಕಥೆಗಳು ಓದುಗರ ಜಿಜ್ಞಾಸೆಗೆ ಮಂಥನಕ್ಕೆ ಒಳಪಡಬೇಕಾದ ಕಥೆಗಳು. ಚರ್ಚಿನ ಬಾಡ, ಹಿಂಭಾಗ ಮತ್ತು ಮುಂಭಾಗ, ಮೇಲ್ಬಾಗ ಮತ್ತು ಅಕ್ಕ ಪಕ್ಕದ ಬದುಕಿನ ಬಗ್ಗೆ, ಇವರ ಹಾಗೆ ಅಧಿಕಾರಯುತ ವಾಗಿ, ಮತ್ತು ಜವಾಬ್ದಾರಿಯಿಂದ ಬರೆದವರು ಮತ್ತೊಬ್ಬರಿಲ್ಲ. ಇವರ ಸಾಹಿತ್ಯ ದಲ್ಲಿ ನಮ್ಮ ಪ್ರಮುಖವಾಹಿನಿಯ ಕಥೆ ಕಾದಂಬರಿಗಳಲ್ಲಿರುವ ಹಲವು ರಚನಾ ವಿನ್ಯಾಸಗಳ, ಕಾಳಜಿಗಳ, ಮತ್ತು ದಟ್ಟವಾದ ದ್ವಂದ್ವ, ಆಂತರಿಕ ಹೋರಾಟ ಇಲ್ಲಿಯೂ ಗೋಚರವಾಗುತ್ತದೆ. ಡಿಸೋಜರ ಕಥೆ ಕಾದಂಬರಿಗಳಲ್ಲಿ ಬರೀ ವೈಚಾ ರಿಕ ಸರ್ಕಸ್‌ವಿರುವುದಿಲ್ಲ. ಜಿಜ್ಞಾಸೆಯ ಹೆಸರಿನಲ್ಲಿ ಅನೇಕ ಸಲ ಮೂಡುವ ಅಮೂರ್ತ ಚರ್ಚೆಗಳ ಬೆನ್ನು ಹತ್ತುವದಿಲ್ಲ. ಮನುಷ್ಯನ ಬದುಕಿನ ಸುತ್ತಿಲೂ ಸುತ್ತು ತ್ತಲೆ ಇರುತ್ತಾರೆ. ಒಮ್ಮೆ ಹೋದಲ್ಲೆ ಮತ್ತೆ ಮತ್ತೆ ಹೋಗುವ ಸ್ವಭಾವ ಇವರದ್ದು. ಪ್ರತಿಸಲ ಹೋದಾಗ ಮತ್ತೇನನ್ನೊ ಕಾಣುವ ಪ್ರವೃತ್ತಿ. ಚರ್ಚಿನ ಅಂಗಳ ಮತ್ತು ಕ್ರಿಶ್ಚಿಯನ್ ಕಾಲೋನಿಗಳು ಅಗ್ರಹಾರ ಮತ್ತು ಮೊಹಲ್ಲಾಗಳಿಗಿಂತಲೂ ಚಿಕ್ಕ ದಾದರೂ ಈ ಕ್ಷೇತ್ರ ಕುರಿತು ಒಬ್ಬ ಲೇಖಕ, ಸಾಮಾನ್ಯವಾಗಿ ಎಷ್ಟು ಬರೆಯ ಬಹುದೋ ಅದಕ್ಕಿಂತಲೂ ಹೆಚ್ಚು ಇವರು ಬರೆದಿದ್ದಾರೆ. ಅಷ್ಟರಮಟ್ಟಿಗೆ ಕ್ರೈಸ್ತ ಬದುಕಿನ ಎಲ್ಲಾ ಸ್ತರಗಳನ್ನು ವಿಶ್ಲೇಷಿಸಿದ್ದಾರೆ. ಹೀಗಾಗಿ ಇವರ ಈ ಕ್ಷೇತ್ರದ ಕಥೆಗಳನ್ನು ಓದಿದವರಿಗೆ ಕ್ರೈಸ್ತರೆಂದಾಗ ರೋಮನ್ ಕ್ಯಾಥೋಲಿಕರನ್ನು ಹೊರತು ಮತ್ಯಾವ ಕ್ರೈಸ್ತರ ನೆನಪು ಬರುವುದೇ ಇಲ್ಲ. ಪ್ರಾಟೆಸ್ಟೆಂಟ್ ಕ್ರೈಸ್ತರ ಹಿನ್ನೆಲೆಯಲ್ಲಿ ಇವರು ಬರೆದದ್ದು "ಪಿಟೀಲು" ಎಂಬ ಒಂದೇ ಒಂದು ಕಥೆ ಮಾತ್ರ

ಡಿಸೋಜರ ಕ್ರೈಸ್ತ ಹಿನ್ನೆಲೆಯ ವೈವಿಧ್ಯತೆ ಕುತೂಹಲಕಾರಿ. "ಕೊನೆ" ಕಥೆಯಲ್ಲಿ ಬರುವ ಆಲ್‌ಫೋನ್ಸ ಅಜ್ಜ, "ಪಾದರಿ ಹೆನ್ರಿ ಸಿಂಪಸನ್" ಕಥೆಯ ಸಿಂಪಸನ್, "ಬಣ್ಣ"ದ ಬಾಲ್ತಿದಾರ್, "ಪಾದರಿಯಾಗುವ ಹುಡುಗ" ಕಥೆಯ ವಿನ್ಸೆಂಟ್, "ಪಿಟೀಲು" ಕಥೆ ಯಲ್ಲಿ ಬರುವ ಕೆಳಸ್ತರದವನೊಬ್ಬನಿಗೆ ಪಿಟೀಲು ಕಲಿಸಿ ಚರ್ಚಿನಲ್ಲಿ ಹಾಡಿಸಿದ ಆ ಪಾದ್ರಿ, ಚರ್ಚಿಗೆ ಬರುತ್ತಿಲ್ಲ ಅನ್ನುವ ಒಂದೇ ಕಾರಣಕ್ಕಾಗಿ ಸತ್ತ ಮರಿಯಣ್ಣನಿಗೆ ಸಮಾಧಿ ಮಾಡದ "ಅರಿಯದವನು" ಕಥೆಯ ಆ ಫಾದರ್—ಇಂತಹ ಅನೇಕರು ಡಿಸೋಜರ ವಿಶೇಷ ವ್ಯಕ್ತಿಗಳು. ವ್ಯಕ್ತಿ ವಿಶಿಷ್ಟ ಅನುಭವದ ಮೂಲಕವೆ ಜೀವನ ನೋಡುವ ಸಾಹಿತಿಯೊಬ್ಬನ ಬಿಡಿಬಿಡಿ ಚಿಕ್ಕ ಕೃತಿಗಳು ಅನುಭವದ ಎಲ್ಲ ಸ್ತರ ಗಳನ್ನು ತೋರಿಸುವುದು ಸಹಜವಾದರೂ ಇವುಗಳ ಪರಸ್ಪರ ಉದ್ದೇಶ ಕತೆ ಗಾರನ ಒಟ್ಟಾರೆ ಜೀವನ ದೃಷ್ಟಿಯನ್ನು ಕಂಡುಕೊಳ್ಳಲು ತುಂಬಾ ಸಹಾಯ ಮಾಡು ತ್ತವೆ, ಕತೆಗಳ ಮೂಲಕವೆ ಈ ಕತೆಗಾರನು ದಾಖಲು ಮಾಡುವ ಮೌಲ್ಯಗಳ ಅರಿ ವಾಗುತ್ತದೆ. ಇವರ ಕಥೆಗಳೆಂದರೆ ಬರೀ ಪ್ರಸಂಗ, ಬರೀ ಘಟನೆ ಅಥವ ವ್ಯಕ್ತಿ

ಯೊಬ್ಬನ ವಿಷಯವೂ ವಿವರಣೆಯೂ ಅಲ್ಲ. ಎಷ್ಟೋ ಸಲ ಕೇವಲ ಸ್ಥಿತಿಗತಿಯೊಂದರ ಪರಿಶೀಲನೆಯೇ ಇವರಿಗೆ ಕಥೆಗಳಾಗುತ್ತವೆ. ಹೀಗಾಗಿ ಇವರ ಅನೇಕ ಕಥೆಗಳು ನಮ್ಮನ್ನು ಮೈಲುಗಟ್ಟಲೇ ಪ್ರಯಾಣ ಮಾಡಿಸಿ ಮೊದಲಿದ್ದ ಚಿಕ್ಕ ಪರಿಧಿಯೊಂದರಲ್ಲಿಯೇ ಹೊಸದಾಗಿ ಯೋಚಿಸಲು ಬಿಡುತ್ತವೆ. ಬದುಕು ಚೆಂದವಾಗಿರಬೇಕು, ಇದು ಇರಬೇಕಾದಷ್ಟು ಚೆಂದ ಏಕಾಗಿಲ್ಲ ಅನ್ನುವದನ್ನು ಬಹಳ ಕಾಳಜಿಯಿಂದ ವಿಶ್ಲೇಷಿಸುತ್ತಾರೆ. ಈ ವಿಶ್ಲೇಷಣೆ ಮತ್ತೆ ಯಾವದೋ ಒಂದು ದೊಡ್ಡ ವೈಚಾರಿಕತೆಯ ಮೂಸೆಯಲ್ಲಿಟ್ಟು ಕಾಯಿಸಿ ಕುಟ್ಟಿ ನೋಡದೆ ನಮ್ಮ ದಿನ ನಿತ್ಯದ ಉಣ್ಣುವ, ಉಡುವ, ಓಡಾಡುವ, ಬೆರೆಯುವ, ಕೊಳ್ಳುವ, ಕೊಡುವ ಕ್ರಿಯೆಗಳಲ್ಲಿಯೇ ತುಂಬಿಸಿಡುತ್ತಾರೆ.

ಒಂದು ಜನಾಂಗದ ಬದುಕನ್ನು ಅವರ ದಿನನಿತ್ಯ ಜೀವನದ ದಟ್ಟವಾದ ವಿವರಣೆಗಳಲ್ಲಿ ಸೆರೆ ಹಿಡಿಯುವಂತೆ ಮಾಡಿ, ಆ ಮೂಲಕ ಆ ಸಮಾಜವನ್ನು ವಿಶ್ಲೇಷಿಸುವುದು ವಾಸ್ತವವಾದಿ ಬರವಣಿಗೆಯ ಒಂದು ಮುಖ್ಯ ಅಂಶ. ಈ ದೃಷ್ಟಿಯಿಂದ ನಮ್ಮ ಎಲ್ಲಾ ಹೊಸ ಲೇಖಕರು ಒಳ್ಳೆಯ ಕೆಲಸವನ್ನೇ ಮಾಡುತ್ತಿದ್ದಾರೆ. ನಮ್ಮಲ್ಲಿಯ ದಲಿತ ಸಾಹಿತಿಗಳಾಗಲಿ, ಮುಸ್ಲಿಂ ಲೇಖಕರಾಗಲಿ ತಮ್ಮ ಜನಾಂಗದ ಬೇನೆ ಬೇಸರ ಸುಖ ದುಃಖ ದುಮ್ಮಾನಕ್ಕೆ ಬಾಯಿಗಳಾಗಿದ್ದಾರೆ. ಇವರೆಲ್ಲ ತಮ್ಮ ತಮ್ಮ ಸಾಮಾಜಿಕ, ಧಾರ್ಮಿಕ ಸಂಸ್ಥೆಗಳ ಬಗ್ಗೆ ಬರೆಯುವದು ಅನಿವಾರ್ಯ. ಕ್ರೈಸ್ತ ಹಿನ್ನೆಲೆಯ ಡಿಸೋಜರ ಕಥೆಗಳು ಈ ಒಂದು ಸತ್ಯವನ್ನು ಎತ್ತಿ ಹಿಡಿದಿವೆ. ವ್ಯಕ್ತಿಗಳ ಬದುಕುಗಳನ್ನು ಒಂದುಗೂಡಿಸುವ ಬದಲಿಗೆ, ಹಿತವಾಗಿಸುವ ಬದಲಿಗೆ, ಎಷ್ಟೋ ಸಲ ಈ ಸಂಸ್ಥೆಗಳ ವ್ಯವಸ್ಥೆಗಳು, ತನ್ನ ಸಮಾಜಕ್ಕೇನೆ ಧಕ್ಕೆಯನ್ನುಂಟು ಮಾಡುತ್ತವೆ ಇದು ಎಲ್ಲಾ ಧರ್ಮಕ್ಕೂ ಅನ್ವಯಿಸುವ ಒಂದು ರೀತಿಯ ಚಿರಸತ್ಯ. ಸಂಪ್ರದಾಯ ನಿಷ್ಠ, ಮೇಲೆ ಎಲ್ಲವೂ ಸುಣ್ಣ ಬಳಿದಷ್ಟು ಹೊಳಪು ಕಾಣುವ, ಸಮಾಜದ ಒಳಗಿನ ಅನೇಕ ಅಶಾಂತ, ಅಹಿತ, ಅತೃಪ್ತಿಗಳ ಜ್ವಾಲಾಮುಖಿಗಳನ್ನು ಡಿಸೋಜ ತಟ್ಟಿ ತಟ್ಟಿ ತೋರಿಸಿದ್ದಾರೆ. ಹೀಗೆ ತೋರಿಸುವಲ್ಲಿ ಬಂಡಾಯದ ಮಿತಿ ಮೀರಿದ ಗಡುಸುತನವಾಗಲಿ, ಹೆಚ್ಚಿನ ಕ್ರಾಂತಿಕಾರಕ ಆವೇಶಗಳಾಗಲಿ ಇಲ್ಲ. ಇವರಲ್ಲಿ ಕಟು ವಾಸ್ತವದ ತೀರಾ ಸಮೀಪದ ಸಂಪರ್ಕದಿಂದುಂಟಾದ ಗಾಢ ವಿಷಾದವಿದೆ. ದಲಿತರ ಬಗ್ಗೆ ಸಾಕಷ್ಟು ಬರೆದರೂ ಇವರನ್ನು 'ದಲಿತ ಸಾಹಿತಿ' ಎಂದಾಗಲಿ, 'ಬಂಡಾಯ ಸಾಹಿತಿ'ಯೆಂದಾಗಲಿ ಕರೆಯಲಿಲ್ಲ. ಕಟುವಾಸ್ತವದ ಗಾಢತೆಯನ್ನು ಕಲಾತ್ಮಕವಾಗಿ ಹಣೆಯುವಲ್ಲಿ ಡಿಸೋಜ ಇತರ ಎಲ್ಲಾ ಮುಸ್ಲಿಂ ಕ್ರೈಸ್ತ ಲೇಖಕರಿಗಿಂತ ಹೆಚ್ಚಿನ ಒಂದು ರಮ್ಯ ಪ್ರಜ್ಞೆಯನ್ನು ಹೊಂದಿದ್ದಾರೆ. ಬಹುಶಃ ಈ ಕಾರಣದಿಂದಲೇ ಇವರು 'ದಲಿತ,' 'ಬಂಡಾಯ' ಮುತ್ತಿತರ ಲೇಬಲ್‌ಗಳಿಗೆ ಬಾಧ್ಯಸ್ಥರಾಗಲಿಲ್ಲ.

ಲೇಖಕನಾದವನು ತನ್ನ ಬರವಣಿಗೆಯ ಅಭಿವ್ಯಕ್ತಿಯಲ್ಲಿ ತನ್ನ ವೈಯಕ್ತಿಕ ಅನುಭವ ಮತ್ತು ಜೀವನ ದೃಷ್ಟಿಯ ಮೇಲೆ ಗೊತ್ತಿಲ್ಲದ ರೀತಿಯಲ್ಲಿ ಅವಲಂಬಿತನಾಗಿರುತ್ತಾನೆ. ತನ್ನ ಸಮಕಾಲೀನ ಸಾಮಾಜಿಕ, ಧಾರ್ಮಿಕ ವಾಸ್ತವತೆಗಳನ್ನು ತನ್ನದೇ ಆದ ರೀತಿಯಲ್ಲಿ ಚಿಂತಿಸುತ್ತಾನೆ. ಇಂತಹ ವಾಸ್ತವತೆಯ ಚಿಂತನೆಗಳಲ್ಲಿ ಬರಹಗಾರನೊಬ್ಬ ಎಷ್ಟರಮಟ್ಟಿಗೆ ಮುಳುಗಿರುತ್ತಾನೆ ಮತ್ತು ಎಷ್ಟರಮಟ್ಟಿಗೆ ಪ್ರಜ್ಞಾಪೂರ್ವಕವಾಗಿ ಮೀರಲು ಪ್ರಯತ್ನಿಸುತ್ತಾನೆ ಎಂಬುವುದು ಬಹಳ ಮುಖ್ಯ. ಬರಹಗಾರ ತನ್ನ ಸುತ್ತ ಮುತ್ತಲಿನ ವ್ಯಾಪಾರವನ್ನು ಮರೆತು ಬರೆಯಲು ಸಾಧ್ಯವಿಲ್ಲ. ಹೀಗಿರುವುದರಿಂದ ಧರ್ಮ ಜಾತಿ ಜನಾಂಗದ ಸಾಹಿತ್ಯ ರಚನೆ ಮಾಡುವಾಗ ಹಲವಾರು ತನ್ನ ಜಾತಿ ಸತ್ಯಗಳು ಸಹಜವಾಗಿ ಅವನಲ್ಲಿ ಕೆಲಸ ಮಾಡುತ್ತಿರುತ್ತದೆ. ಇದೇನು ಸಂಕುಚಿತವಾಗಲಿ ತಪ್ಪಾಗಲಿ ಅಲ್ಲ. ಲೇಖಕ ತನ್ನ ಧರ್ಮ ಹಿನ್ನಲೆಯ ಕಟ್ಟುಪಾಡಿನಲ್ಲಿ ಬೆಳೆದು ಬಂದಿರುವುದರಿಂದ ಆ ಜನಾಂಗದ ಸಮಷ್ಟಿ ಬದುಕಿನ ಬಗ್ಗೆ ಸಹಜವಾದ ಸಾಮೀಪ್ಯವಿರುವುದರಿಂದ ಬೇರೆ ಜಾತಿ ಧರ್ಮಗಳ ಬದುಕಿಗಿಂತ ತನ್ನ ಜಾತಿಯ ಒಳ ಬದುಕಿನ ದನಿಯನ್ನು ಚೆನ್ನಾಗಿ ತಿಳಿದಿರುತ್ತಾನೆ. ಹೀಗಾಗಿ ತಾನು ಕಂಡುಂಡ ಜಾತಿಯ ಚೌಕಟ್ಟಿನಲ್ಲಿ ಬರೆಯುವಾಗ ಆ ಸಮಾಜದ ಯಾವ ಯಾವ ದೀರ್ಘಕಾಲಿಕ ಮೌಲ್ಯಗಳನ್ನು ಸ್ವೀಕರಿಸುತ್ತಿದ್ದಾನೆ, ಮತ್ತು ಮತ್ತ್ಯಾವ ಮೌಲ್ಯಗಳನ್ನು ಕೈಬಿಡುತ್ತಿದ್ದಾ ಎಂಬ ಅಂಶ ಮುಖ್ಯ. ದೊಡ್ಡ ಸಾಹಿತಿಯೊಬ್ಬನು ಸದಾ ತನ್ನ ಜಾತಿಯ ಹಂದರದಲ್ಲಿಯೇ ಇರಲು ಸಾಧ್ಯವಿಲ್ಲ. ತನ್ನ ಜಾತಿಯ ಹಂದರದಲ್ಲಿಯೇ ಇದ್ದು ಅದನ್ನು ಮೀರುವ ಕ್ರಮದಲ್ಲಿ ಆತ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದ್ದಾನೆಂಬುವುದು ಸಾಹಿತ್ಯಕವಾಗಿಯೂ ಸಾಂಸ್ಕೃತಿಕವಾಗಿಯೂ ಮುಖ್ಯವಾಗುತ್ತದೆ. ತನ್ನ ಮೂಲ ನೆಲೆಯನ್ನೇ ಕೈ ಬಿಟ್ಟು ಗಾಳಿಯಲ್ಲಿ ತೇಲಾಡುತ್ತ ಅಮೂರ್ತವಾದ ದೊಡ್ಡ ದೊಡ್ಡ ಸತ್ಯಗಳನ್ನು ಪ್ರತಿಪಾದಿಸುವ ಸಾಹಿತಿಗಿಂತ ತನ್ನ ಅನಿಸಿಕೆ ವಿಚಾರ ಸರಣಿಯನ್ನು, ಒಂದು ಗೊತ್ತಾದ ಕಾಲ ದೇಶ ಮತ್ತು ಮನುಷ್ಯ ಸಂದರ್ಭದಲ್ಲಿಯೇ ದಾಖಲೆ ಮಾಡುವ ಸಾಹಿತಿಯೇ ತುಂಬಾ ಮುಖ್ಯವಾಗುತ್ತಾನೆ. ಈ ದೃಷ್ಟಿಯಿಂದಲೇ ಡಿಸೋಜರ ಅನೇಕ ಕ್ರೈಸ್ತ ಹಿನ್ನೆಲೆಯ ಕತೆಗಳು ಮುಖ್ಯವಾಗುತ್ತವೆ. ಕ್ರೈಸ್ತರ ಬದುಕಿನಲ್ಲಿ ಯಾವದು ನಿಜವಾದ ಮೌಲ್ಯ, ಯಾವುದು ಸತ್ಯ, ಯಾವದು ಮಿಥ್ಯ ಎನ್ನುವ ಅಂಶವನ್ನು ಕಲಾತ್ಮಕವಾಗಿ ಹೆಣೆದಿದ್ದಾರೆ. ಹೀಗಿದ್ದೂ ಇವರು ತಮ್ಮ ಸಾಹಿತ್ಯಕ ಬದುಕನ್ನು ಚರ್ಚಿನ ಅಂಗಳದಲ್ಲಿಯೇ ಕಳೆದಿಲ್ಲ. ಕ್ರೈಸ್ತ ಹಿನ್ನೆಲೆ ಕಥೆಗಳ ಮೂರರಷ್ಟು ಕಥೆಗಳನ್ನು ಬೇರೆ ಜಾತಿ ಧರ್ಮ ಸಾಮಾಜಿಕ ಹಿನ್ನಲೆಯಲ್ಲಿ ಬರೆದಿದ್ದಾರೆ.

ಕ್ರೈಸ್ತ ಸಮಾಜದ ವ್ಯವಸ್ಥೆ ಮತ್ತು ಬದುಕಿನ ಕೆಲವು ಸಮಸ್ಯೆಗಳು. ಅಹಿತ ಬೇರುಗಳು ಈ ದೇಶದ ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಸೇರಿದ್ದೂ, ಪ್ರಾರಂಭದ ವರ್ಷಗಳಲ್ಲಿ

ಡಿಸೋಜ ಈ ಬೇರುಗಳನ್ನು ಹೆಚ್ಚು ಹೆಚ್ಚಾಗಿ ಪದೇ ಪದೇ ಬರೆಯುವ ಭರದಲ್ಲಿ ಪಕ್ಕದಲ್ಲೇ ಇದ್ದ ಹಲವಾರು ರಚನಾತ್ಮಕ ಬೇರುಗಳ ಕಡೆಗೆ ಅಷ್ಟೊಂದು ಗಮನ ಕೊಡಲಿಲ್ಲ, ಇದಕ್ಕೆ ಕತೆಗಾರನ ಆಗಿನ ಪಯಸ್ಸಿನ ಬಿಸಿಯೇ ಕಾರಣವಿರಬಹುದು. ತಮ್ಮ ನಂತರದ ವಯಸ್ಸಿನಲ್ಲಿ ಬರೆದ ಅನೇಕ ಒಳ್ಳೆಯ ಕಥೆಗಳಲ್ಲಿ ಕ್ರೈಸ್ತ ಬದುಕಿನ ರಚನಾತ್ಮಕ ಬದುಕಿನ ಸಾಕ್ಷಿಯನ್ನು ಕೊಟ್ಟಿದ್ದಾರೆ.

ಕ್ರೈಸ್ತ ಬದುಕಿನ ಹಿನ್ನಲೆಯ ಇವರ ಕಥೆಗಳನ್ನು ಒಂದೇ ಸಮನೆ ಓದುತ್ತಾ ಹೋದಂತೆ ಕೊನೆ ಕೊನೆಗೆ ಡಿಸೋಜ ಒಂದು ರೀತಿಯಲ್ಲಿ ರಿಪೀಟ್ ಆದ ಹಾಗೆ ಇಲ್ಲವೆ ಏಂತ ಹಾಗೆ ಅನಿಸುತ್ತಾರೆ. ಆದರೆ ಇದು ಕತೆಗಾರನ ಕೊರತೆ ಅಲ್ಲ. ಈ ದೇಶದ ಕ್ರೈಸ್ತರ ಸಾಂಸ್ಕೃತಿಕ ಬದುಕಿನಲ್ಲಿ ವೈವಿಧ್ಯತೆಗಳು ಕಡಿಮೆ. ಹಿಂದೂ ಸಾಂಸ್ಕೃತಿಕ ಬದುಕಿನಲ್ಲಿ ಕತೆಗಾರನಿಗೆ ಒಂದು ದೊಡ್ಡ ಗಣಿಯೇ ಇದೆ. ಆದರೆ ಇಲ್ಲಿಯ ಕತೆಯೇ ಬೇರೆ. ಲೇಖಕ ಒಮ್ಮೆ ಹೋದಲ್ಲಿಯೇ ಮತ್ತೆ ಮತ್ತೆ ಹೋಗಬೇಕಾಗುತ್ತದೆ. ಚರ್ಚಿನ ಸುತ್ತ ಮುತ್ತ, ಒಂದೆರಡು ಹಬ್ಬ ಜಾತ್ರೆಗಳ ಸುತ್ತ ಒಬ್ಬ ಲೇಖಕ ಎಷ್ಟುಸಾರಿ ತಿರುಗಬಹುದು ?

ದಲಿತರ ಬದುಕನ್ನು ಚಿತ್ರಿಸುವಲ್ಲಿ ಸವರ್ಣೀಯ ಲೇಖಕರಿಗೆ ಇರುವ ತೊಂದರೆ, ಸವರ್ಣೀಯರ ಬದುಕಿನ ಒಳಪದರವನ್ನು ಚಿತ್ರಿಸುವಲ್ಲಿ ದಲಿತರಿಗೆ ಇರುವ ತೊಂದರೆ, ಹಿಂದೂ ಬದುಕಿನ ಬಗ್ಗೆ ಬರೆಯುವಾಗ ಕ್ರೈಸ್ತ, ಮುಸ್ಲಿಂ ಲೇಖಕರಿಗೆ ಇರುವ ಸಮಸ್ಯೆ ಅಥವಾ ಕ್ರೈಸ್ತ, ಮುಸ್ಲಿಂ ಹಿನ್ನಲೆಯಲ್ಲಿ ಬರೆಯುವಾಗ ಹಿಂದೂ ಹಿನ್ನೆಲೆಯ ಸಾಹಿತಿಗೆ ಇರುವ ತೊಂದರೆ ಸಾಮಾನ್ಯ. ಇದು ಕೇವಲ ದೂರ-ಸಮೀಪದ ಪ್ರಶ್ನೆ. ಇದನ್ನು ಮೀರಿ ಬೆಳೆದವರು ಕನ್ನಡದಲ್ಲಿ ಕೆಲವರು ಮಾತ್ರ. ಇವರಲ್ಲಿ ಒಬ್ಬರಾದ ಡಿಸೋಜ ದಲಿತ ಸವರ್ಣೀಯರ ಬದುಕನ್ನು ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಎಲ್ಲಾ ಮನುಷ್ಯರಿಗೆ ಸಮಾನವಾದದ್ದನ್ನು, ಕೆಲವು ಮನುಷ್ಯರ ಸಂದರ್ಭದಲ್ಲಿ ಇಟ್ಟು ನೋಡುವ ಇವರ ಬರವಣಿಗೆ ಬಹಳ ಮುಖ್ಯ. ಈ ಹಿನ್ನೆಲೆಯ ಕೃತಿಗಳಲ್ಲಿ ಪ್ರತಿಧ್ವನಿತವಾಗುವ ಮೌಲ್ಯ ಪ್ರಜ್ಞೆಗಳು ಒಟ್ಟಾರೆ ಸಾರ್ವತ್ರಿಕ ಮೌಲ್ಯ ಪ್ರಜ್ಞೆಗೆ ಹೊಸದೊಂದನ್ನು ಸೇರಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಡಿಸೋಜರ ಈ ರೀತಿಯ ಕಥೆಗಳ ಬಗ್ಗೆ ಸಾಹಿತ್ಯಿಕ ವೇದಿಕೆಯಲ್ಲಿ ವಿಮರ್ಶೆಗಳಾಗಬೇಕು. ಪ್ರತ್ಯೇಕವಾಗಿ ಕ್ರೈಸ್ತ ವೇದಿಕೆಗಳಲ್ಲೂ ಸಾಹಿತ್ಯಕವಾಗಿಯೂ, ಸಾಂಸ್ಕೃತಿಕವಾಗಿಯೂ ಚರ್ಚೆಗಳಾಗಬೇಕು. ಒಂದನ್ನು ಹೊರತು ಇವರ ಎಲ್ಲಾ ಕತೆಗಳು ರೋಮನ್ ಕ್ಯಾಥೋಲಿಕ್ ಚರ್ಚಿನ ಹಿನ್ನಲೆಯಲ್ಲಿದ್ದರೂ, ಸ್ವಲ್ಪ ಹೆಚ್ಚುಕಡಿಮೆ ಇವು ಎಲ್ಲಾ ಚರ್ಚುಗಳಿಗೆ ಅನ್ವಯಿಸುವ ವಸ್ತು. ಒಂದೊಂದು ಚಿಕ್ಕ ಕಥೆಯನ್ನೇ ಚಿಕ್ಕ ಗುಂಪಿನಲ್ಲಿ

ಅಭ್ಯಾಸ ಮಾಡಬಹುದು. ಉದಾ: "ಪಾದರಿಯಾಗುವ ಹುಡುಗ"–ಕುಟುಂಬದ್ರ ಎಂಟನೆ ಮಗನನ್ನು ಪಾದರಿಯನ್ನಾಗಿ ಮಾಡಬೇಕೆನ್ನುವ ಹರಕೆ ಮತ್ತು ಹಠ ತಂದೆ-ತಾಯಿಗಳದ್ದು. ಆದರೆ ಆ ಹುಡುಗ ವಿನ್ಸೆಂಟನ ಅನುಭವವೇ ಬೇರೆ ಒಬ್ಬ ಪಾದಿ ಮತ್ತು ಜನಸಾಮಾನ್ಯನೊಬ್ಬನ ಮಧ್ಯೆ ವ್ಯತ್ಯಾಸ ಕಾಣದಿದ್ದನ್ನು ನೋಡಿ ವಿನ್ಸೆಂಟ್ ಸೆಮಿನೆರಿಗೆ ಹೋಗುವ ಬದಲು ಸಾಲಮಾಡಿ ಬೊಂಬಾಯಿಗೆ ಹೋಗುತ್ತಾನೆ. "ದೇವರ ಕೆಲಸದ ಮನುಷ್ಯ"– ಚರ್ಚಿನ ಪಾದ್ರಿಗೆ ನೆರವು ನೀಡುವ ಈ ಮಿಸ್ಟರ್ ಪೆರೇರಾ ತುಂಬಾ ಬುದ್ಧಿವಂತ ಮತ್ತು ಶಿಸ್ತಿನವನು. ಚರ್ಚಿನವರನ್ನು ಶಿಸ್ತಿನಲ್ಲಿ ಇಟ್ಟುಕೊಳ್ಳುವ ತರಾತುರಿಯಲ್ಲಿಯೇ ಈ ವ್ಯಕ್ತಿ ಏನಾಗುತ್ತಾನೆಂದರೆ ಡಿಸೋಜ ಚನ್ನಾಗಿ ಹೇಳುತ್ತಾರೆ,... "ಪಾದರಿ ಮನೆಯ ಕೆಂಪು ಹುಂಜ ಹೇಂಟೆಗಳನ್ನು ಓಡಿಸಿ ಕೊಂಡು ಗದ್ದಲ ಮಾಡುತ್ತಿತ್ತು." ಈ ದೇವರ ಕೆಲಸದ ಮನುಷ್ಯ ಯಾವ ಪ್ರಪಾತಕ್ಕೆ ಇಳಿದನೆಂದರೆ, ಚರ್ಚಿನ, ಪಾದ್ರಿಯ ಮತ್ತು ಧರ್ಮದ ಹೆಸರಿಗೆ ಮಸಿ ಬಳಿಯು ತ್ತಾನೆ. "ಪಾದರಿ ಹೆನ್ರಿ ಸಿಂಸನ್"– ಹೆನ್ರಿ ಸಿಂಸನ್ ಇಂಗ್ಲಂಡಿನಿಂದ ಇಲ್ಲಿಗೆ ಬಂದು ಇಲ್ಲಿಯ ಸಮಾಜಕ್ಕೆ ಹೊಂದಿಕೊಂಡವನು. ತನ್ನೂರಿನ ಆಸ್ತಿಯನ್ನು ಇಲ್ಲಿಗೆ ತಂದು ಚರ್ಚು, ಶಾಲೆ, ಆಸ್ಪತ್ರೆ, ಕಾರ್ಖಾನೆಗಳನ್ನು ನಿರ್ಮಿಸಿ ಕ್ರೈಸ್ತರಿಗೆ ಬದುಕಲು ತೋರಿಸಿದವನು. ಹೆನ್ರಿಯ ಮರಣ ನಂತರ ಈ ಸಂಸ್ಥೆಗಳೆಲ್ಲವೂ ವ್ಯಾಪಾರಿ ಸಂಸ್ಥೆಗಳಾಗುವ ಘಟನೆಯಲ್ಲಿ ಈ ನಾಡಿನ ಇತಿಹಾಸ ಒಂದು ತುಣುಕು ಪ್ರತಿಫಲಿಸು ತ್ತದೆ. "ಬಣ್ಣ"– ಡಿಸೋಜರ ಅತ್ಯುತ್ತಮ ಕಥೆಯಲ್ಲಿ ಒಂದು. ಇಗರ್ಜಗಳಿಗೆ ಬಣ್ಣ ಚಿತ್ರ ಬರೆಯುವ ಕಲಾವಿದ ಬಾಲ್ತಿದಾರ್ ಬಹಳ ದೊಡ್ಡ ಕಲಾವಿದನಲ್ಲದಿದ್ದರೂ ಅವನ ಅಸಾಧಾರಣತೆ ಇರುವದು ಅವನಲ್ಲಿರುವ ದೈವ ಭಕ್ತಿಯಲ್ಲಿ ಮತ್ತು ಚಿತ್ರ ಬಿಡಿಸುವ ಕೆಲಸದಲ್ಲಿ. ಅವನಿಗಿರುವ ಆತ್ಮಿಯತೆಯ ಈ ಸಂಗತಿ ಕಲೆಯ ಸ್ವರೂಪದ ಬಗ್ಗೆ ಮೂಲಭೂತವಾಗಿ ವಿಚಾರ ಮಾಡಲು ಹಚ್ಚುತ್ತದೆ. ಈ ರೀತಿ ಕ್ರೈಸ್ತ ಬದುಕಿನ ಹಿನ್ನಲೆಯಲ್ಲಿ ದೀರ್ಘಕಾಲಿಕ ಮೌಲ್ಯಗಳನ್ನು ಹೊಂದಿರುವ ಅನೇಕ ಅತ್ಯುತ್ತಮ ಸಣ್ಣ ಕಥೆಗಳನ್ನು ಇವರು ಕೊಟ್ಟಿರುವದಾದರೂ "The shoes of Fisherman" ನಂತಹ ಒಂದು ಕ್ರೈಸ್ತ ಹಿನ್ನೆಲೆಯ ಕಾದಂಬರಿ ಇವರಿಂದ ಇನ್ನೂ ಬರಬೇಕಾಗಿದೆ.

ಡಿಸೋಜರ "೨೫ ಕಥೆಗಳು" ಸಂಕಲನವನ್ನು ಅವಲೋಕನ ಮಾಡುವಾಗ ಕೀರ್ತಿ ನಾಥ ಕುರ್ತಕೋಟಿಯವರು ಹೇಳುವ ಕೆಲವು ಮಾತುಗಳು ಬಹು ಮುಖ್ಯ. "— — — — ಈ ಕಥೆಗಳು ನಾ. ಡಿಸೋಜರ ಕಲೆಗಾರಿಕೆ ರಹಸ್ಯವನ್ನು ಬಯಲು ಮಾಡುತ್ತವೆ, ಜೀವನದ ಅರ್ಥವನ್ನು ಹುಡುಕುವ ಕೆಲಸ ಕಥೆಯದೆ ಹೊರತು ಕತೆಗಾರನದಲ್ಲ ಎಂದು ತಿಳಿಯಪಡಿಸುತ್ತೇವೆ. ಕತೆಗಾರ ಅಕ್ಷರಶಃ ತಟಸ್ಥ

ನಾಗಿರುತ್ತಾನೆ. ಅಂದರೆ ನದಿಯ ತಟದಲ್ಲಿ ನಿಂತಿರುತ್ತಾನೆ. ಕಲೆ ಹುಡುಕಿ ತಂದಿದ್ದನ್ನು ಪ್ರೀತಿಯಿಂದ ಸ್ವೀಕರಿಸಿ ಬರಹಕ್ಕಿಳಿಸುತ್ತಾನೆ. ಈ ಸಂಗ್ರಹದ ಇಪ್ಪತ್ತೈದು ಕತೆಗಳಲ್ಲಿ ಮನುಷ್ಯನ ಒಳಿತು ಕೆಡುಕು, ಅಷ್ಟೆ ಅಲ್ಲದೆ ಪ್ರತಿಭಟನೆ, ರೋಷ, ಸೇಡು, ಹಿಂಸೆ, ಪ್ರೀತಿ ಹೀಗೆ ಏನೇನೋ ಇವೆ. ಆದರೆ ಯಾವುದನ್ನೂ ಉದ್ವೇಗವಿಲ್ಲದೆ ಚಿತ್ರಿಸುವ ಸಮಾಧಾನ ಕತೆಗಳಿಗೆ ಇದೆ. ಈ ಸಮಾಧಾನದ ಸ್ವರೂಪ ಮಾತ್ರ ಕಲಾತ್ಮಕವಾದದ್ದು. "ಬಣ್ಣ" ಕತೆಯ ಬಾಲ್ತಿದಾರ ಪ್ರತಿ ವರ್ಷ ಅದೇ ಇಗರ್ಜಿಗಳಿಗೆ ಅದೇ ರೀತಿ ಸುಣ್ಣ ಬಣ್ಣ ಹಚ್ಚಿ ಚಿತ್ರಗಳನ್ನು ಬರೆಯುವ ತಾಳ್ಮೆ. ಸಮಾಧಾನ ಅದು ಸೃಜನ ಶೀಲತೆಯೆಂದರೆ ಹೊಸದವುಗಳನ್ನು ಹುಟ್ಟಿಸುವದಲ್ಲ, ವಸ್ತುಗಳನ್ನು ಹೊಸದಾಗಿಸುವದು. ಬಾಲ್ತಿದಾರನ ನವೀಕರಣದ ಕ್ರಿಯೆ ಒಂದು ಕರ್ಮಕಾಂಡವಾಗುವಂತೆ ಒಂದು ಅರ್ಥ ಪೂರ್ಣವಾದ ಕಲೆಯ ವ್ಯಾಪಾರವೂ ಹೌದು..."

ಲೋಕೋಪಯೋಗಿ ಇಲಾಖೆಯ ಕಾರ್ಯಾಗಾರಿಯಲ್ಲಿ ಡಿಸೋಜ ನಿರ್ಮಿಸಿರುವ ಸಾಹಿತ್ಯವೇ ಹೆಚ್ಚು. ಈ ಇಲಾಖೆಯಲ್ಲಿಯೇ ಇದ್ದುಕೊಂಡು, ಈ ಕ್ಷೇತ್ರದ ಸಮಸ್ತ ಸ್ತರಗಳ ಕಪ್ಪು ಬಿಳುಪು ವ್ಯವಹಾರಗಳನ್ನು ಸೂಕ್ಷ್ಮವಾಗಿ ಗಮನಿಸಿ ಸಾಹಿತ್ಯಕವಾಗಿ ಅಭಿವ್ಯಕ್ತಿಗೊಳಿಸಿದ್ದಾರೆ. ಇಲಾಖೆಯ ಕಿಟಕಿ ಬಾಗಿಲು ಕುರ್ಚಿ ಮೇಜು ಫೈಲುಗಳ ಮೂಲಕವೇ ಬದುಕಿನ ಆಂತರಿಕ ಕ್ರಿಯೆಗಳನ್ನು ನೋಡಿದ್ದಾರೆ. ಈ ಇಲಾಖೆಯಲ್ಲಿದ್ದುಕೊಂಡು ತಮ್ಮ ಕಾರ್ಯಕ್ಷೇತ್ರವನ್ನು ಸಾಹಿತ್ಯಕ ಕ್ಷ-ಕಿರಣಕ್ಕೆ ಒಡ್ಡಿರುವ ಸಾಹಿತಿಗಳು ಕೇವಲ ಒಂದಿಬ್ಬರು ಸಿಗಬಹುದೇನೋ! ಅಂಥವರಲ್ಲಿ ಇವರದೆ ಹೆಚ್ಚಿನ ಕೊಡುಗೆ ಆದೀತು. ಶಾಲೆ ಕಾಲೇಜು ವಿಶ್ವವಿದ್ಯಾನಿಲಯ ಕ್ಯಾಂಪಸ್‌ನಲ್ಲಿರುವ ಸಾಹಿತಿಗಳ ಅನುಭವಕ್ಕೆ ಭಿನ್ನವಾದುದ್ದನ್ನು ಇವರು ಅಭಿವ್ಯಕ್ತಿಗೊಳಿಸಿದ್ದಾರೆ. ನಮ್ಮಲ್ಲಿ ಬೇರೆ ಬೇರೆ ವೃತ್ತಿ ಹಿನ್ನೆಲೆಯಿಂದ ಬರೆಯುತ್ತಿರುವ ಸಾಹಿತಿಗಳು ತೀರಾ ಕಡಿಮೆ. ಹೆಚ್ಚಿನವರು ಶೈಕ್ಷಣಿಕ ಮತ್ತು ಕೆಲವರು ಬೇಸಾಯ ಕ್ಷೇತ್ರದವರು. ಕಟ್ಟೋಣದರ ಹಿನ್ನಲೆಯಲ್ಲಿಯೇ ಡಿಸೋಜ ಹತ್ತು ಕಾದಂಬರಿಗಳನ್ನು, ಒಂದು ನೂರು ಕಥೆಗಳನ್ನು ಬರೆದಿರುವುದು ಸೋಜಿಗವೆನಿಸುತ್ತದೆ.

ಕಾರ್ಮಿಕರ ಮತ್ತು ಬಂಡವಾಳಗಾರರ ಮಧ್ಯೆ ನಡೆಯುವ ಘರ್ಷಣೆ, ಕಥೆ ಕಾದಂಬರಿಗಳು ನಮ್ಮಲ್ಲಿ ಅನೇಕ ಇವೆ. ಇವೆಲ್ಲಾ ನಿರ್ದಿಷ್ಟವಾಗಿ ಮಾರ್ಕ್ಸ್‌ನ ಚಿಂತನೆಯ ಚೌಕಟ್ಟಿನಿಂದ ಹೊರಬಂದದ್ದು. ಇನ್ನು ಯಜಮಾನ ಮತ್ತು ಇವನ ಜೀತದಾಳು ಮಧ್ಯ ಇರುವ ಸಂಬಂಧ ಮತ್ತು ಅಲ್ಲಿಯ ಪಾರಂಪರಿಕ ಶೋಷಣೆ ಇನ್ನೊಂದು ರೀತಿಯದು. ಆದರೆ ಈ ದಿಸೆಯಲ್ಲಿ ಬಂದಿರುವ ಡಿಸೋಜರ ಕಥೆಗಳಲ್ಲಿ ರೂಢಿಯಲ್ಲಿರುವ ಯಾವ ಸೈದ್ಧಾಂತಿಕ ಛಾಯೆ ಇಲ್ಲದೆ ಸಹಜವಾಗಿ ಈ ಸಂಬಂಧ ಮೂಡಿ

ಬಂದಿದೆ. ಇವರ ಕಾರ್ಮಿಕರೆ ಬೇರೆ. ಅಣೆಕಟ್ಟು ಕೆರೆಕಾಲುವೆ ಸೇತುವೆ ನಿರ್ಮಾಣದ ದಿನಗೂಲಿ ಕಾರ್ಮಿಕರು. ಗ್ಯಾಂಗ್‌ಮನ್‌ಗಳು. ಇವರ ಬದುಕಿನ ಸ್ಥಿತಿ ಗತಿಯೇ ಬೇರೆ. ಹೆಚ್ಚು ಕಡಿಮೆ ಒಂದೇ ರೀತಿಯ ಕೆಲಸ ಮಾಡುವ ಗಂಡಾಳು ಹೆಣ್ಣಾಳುಗಳು ಇವರು. ಗಂಡಾಳುಗಳ ಸಮಸ್ಯೆ ಹತ್ತಾದರೆ ಹೆಣ್ಣಾಳುಗಳ ಸಮಸ್ಯೆ ನೂರಾರು. ಇಂತವರ ಬದುಕಿನ ಒಂದು ಚಿಕ್ಕ ನೋಟ ಹೀಗಿದೆ: ಬೆಳಕು ಹರಿಯುತ್ತಿದೆ ಅನ್ನು ವಾಗ ಒಡ್ಡರು ಕೊರೆದು ಗುಳಿಯೊಳು ಇರಿಸಿದ್ದ ಸಿಡಿಮದ್ದು ಸಿಡಿಯಿತು. ಬಂಡೆ ಗಳು ಛಿದ್ರ ಛಿದ್ರವಾಗಿ ಬಿರುಕುಬಿಟ್ಟವು. ಈ ಸದ್ದಿಗೆ ಕ್ಯಾಂಪಿನ ಜನ ಭೀತರಾಗಿ ಎದ್ದು ಕುಳಿತರು. ಮಕ್ಕಳು ಕಿರುಚಿಕೊಳ್ಳಲಾರಂಭಿಸಿದವು. ಕಾಡಿನ ಹಕ್ಕಿಗಳು ಕಂಗಾಲಾಗಿ ಗೂಡುಬಿಟ್ಟು ಹಾರಿದವು. ಮೇಸ್ತ್ರಿಗಳು ಪ್ರತಿ ಗುಡಿಸಲು ಎದಿರು ನಿಂತು, ಕೂಲಿಯಾಳುಗಳನ್ನು ಕೂಗಿ ಕರೆದರು. ಬುಟ್ಟಿ, ಬಾಂಡಲೆ, ಹಾರೆ ಪಿಕಾಸಿ ಇತ್ಯಾದಿ ಸಲಕರಣೆಗಳನ್ನು ಹಿಡಿದ ಹೆಂಗಸರು. ಗಂಡಸರು, ಹುಡುಗರು, ಹುಡು ಗಿಯರು ಕಾಮಗಾರಿಯ ಸ್ಥಳಕ್ಕೆ ಧಾವಿಸಿದರು. ಸಂಕನಹಳ್ಳಿ ನಾಲೆಯುದ್ದಕ್ಕೂ ಜನರ ಓಡಾಟ ಗದ್ದಲ ಕಂಡು ಬಂದಿತು (ಕಾದಂಬರಿ : "ತಿರುಗೋಡಿನ ರೈತ ಮಕ್ಕಳು") ಇವೇ ಈ ಜನರ ಸಾಂಕೇತಿಕ ಬದುಕು. ಇವರ ಬದುಕು ಅದೇ ರೀತಿಯಲ್ಲಿ ಕೊರೆ ಯುವದು. ಸಿಡಿಯುವುದು, ಛಿದ್ರ ಛಿದ್ರವಾಗುವದು, ಭಯಭೀತರಾಗುವದು, ಕಂಗಾಲಾಗುವದು. ಇವೆಲ್ಲಾ ಅವರು ಮಾಡುವ ಕೆಲಸದ ಕ್ರಿಯೆಗಳೇ ಅವರ ಬದುಕಿನಲ್ಲಿಯೂ ಆಗುತ್ತದೆ. ಇವರ್ಯಾರು ಒಂದೆಡೆಯಲ್ಲಿ ಬಹಳ ಕಾಲ ದುಡಿದು ನಿವೃತ್ತಿ ಪಡೆಯುವವರಲ್ಲ, ಅಥವಾ ಒಂದೇ ಮನೆತನದಲ್ಲಿಯೇ ಜೀತ ಮಾಡಿ ಕೊಂಡು ಇರುವವರೂ ಅಲ್ಲ. ಇವರೆಲ್ಲಾ ಬೇರೆ ಬೇರೆ ಕಡೆಗಳಿಂದ, ಕೇವಲ ತುತ್ತಿ ಗಾಗಿ ಬರುವ ಗಂಡಾಳು ಹೆಣ್ಣಾಳುಗಳು. ಇವರ ಬದುಕಿನ ರಕ್ತ ಬೆವರಿನ ಹಿಂದೆ ನಡೆಯುವ ನೂರಾರು ಅಮಾನವೀಯ ಶೋಷಣೆ ಗುರುತಿಸಿ ವಿಶ್ಲೇಷಿಸುತ್ತಾರೆ ಇವ್ಯಾವವು ಬರೀ ಕಲ್ಲು ಮರಳುರಾಶಿಯ ಕಥೆಗಳಲ್ಲ. ಬದುಕಿನ ಜೀವಂತ ಕಥೆಗಳು. ಈ ಕಾರ್ಮಿಕರ ಬದುಕು ಒಂದು ರೀತಿಯದಾದರೆ, ಅಲ್ಲಿಯ ಮೇಸ್ತ್ರಿಗಳ, ಕಂಟ್ರಾ ಕ್ಟರುಗಳ, ಇಲಾಖೆಯ ಅಧಿಕಾರಿಗಳ ಒಟ್ಟಾರೆ ಅಲ್ಲಿಯ ಬದುಕಿನ ವ್ಯವಸ್ಥೆಯೇ ಮತ್ತೊಂದು ರೀತಿ.

"ಒಂದು ಛಾನಲ್ಲಿನ ಕಥೆ": ಒಂದು ಕುಟುಂಬದ ಸ್ಥಿತಿಯೊಡನೆ ಈ ಕಥೆ ಪ್ರಾರಂಭ ವಾಗುತ್ತದೆ. ಹೊಸ ಕುಟುಂಬ ಮತ್ತು ಹೊಸ ಛಾನಲ್ಲಿನಲ್ಲಿ ಆಗುವ ಭಾರಿ ವಂಚನೆ ಯನ್ನು ಅನಿವಾರ್ಯವಾಗಿ ಸಹಿಸಿಕೊಳ್ಳುವ ಹೊಸ ಇಂಜನಿಯರ್‌ನ ಸ್ಥಿತಿ ತುಂಬಾ ಸೂಕ್ಷ್ಮ. ಇವನೇ ಹೇಳುವ ಹಾಗೆ "ಕಟ್ಟಿದ ಕಟ್ಟೋಣ ಕಿತ್ತು ಹೋಗಿವೆ, ಕಲ್ಲುಗಳು ಕೊಚ್ಚಿಕೊಂಡು ಹೋಗಿವೆ. ದೊಡ್ಡ ಹಳ್ಳಗಳು ಬಿದ್ದಿವೆ, ಪಾರ್ಶ್ವದ

ಗೋಡೆಗಳಿಗೆ ಸುರಂಗಗಳು ಕಾಣಿಸಿಕೊಂಡಿವೆ." ಈ ಕೆಲಸ ಮಾಡಿದವರನ್ನು ಇಂಜನಿಯರನ್ನು ಹರಾಮಕೋರ್ ಅನ್ನುತ್ತಾರೆ. ಈ ಎರಡು ದುರಂತಗಳನ್ನು ಕಲಾತ್ಮಕವಾಗಿ ಹೆಣೆಯುತ್ತಾರೆ.

"ರಾಷ್ಟ್ರೀಯ ಹೆದ್ದಾರಿಯಲ್ಲಿ ಸಾವು":– ಈ ಆಫೀಸಿನ ಪ್ಯೂನ್ ಅವಶಾನುಲ್ಲ ಹೇಳ್ತಾನೆ; 'ಈ ನ್ಯಾಷನಲ್ ಹೈವೇ ಡಿವಿಜನ್ ಸೂಳೆಮನೆ ಆಗಿ ಬಿಟ್ಟಿದೆ. ಸೂಳೆಮನೆ ಸಾಹೇಬ ಲಂಚ ತಕೋತ್ತಾನೆ. ಕಂಟ್ರಾಕ್ಟರುಗಳ ಜೊತೇಲಿ ಕೂತು ತಿಂತಾನೆ. ಅವರು ಕಳಿಸಿದ ಹೆಂಗಸರ ಜತೆ ಮಜಾ ಮಾಡುತ್ತಾನೆ. ಮ್ಯಾನೇಜರ್, ಗುಮಾಸ್ತರು, ಇಂಜನಿಯರ್‌ಗಳು, ಸಂಬಳದ ಬಿಲ್ಲಿಗೆ ಇಷ್ಟಿಷ್ಟು ಅಂತ ಲಂಚ ಕೇಳ್ತಾರೆ, ಅಕೌಂಟೆಂಟ್, ಕ್ಯಾಶಿಯರ್ಸ್, ಅಕೌಂಟ್ಸ್ ಕ್ಲರ್ಕುಗಳು ಬಿಲ್ಲಿಗಿಷ್ಟು ಚೆಕ್ಕಿಗಿಷ್ಟು ಪರಸೆಂಟು ಮಾಡಿದ್ದಾರೆ, ಗೋಡೌನ ಕೀಪರ್ ಸರಕಾರಿ ಸಿಮೆಂಟು ಕಬ್ಬಿಣ ಎಲ್ಲಾ ಮಾರಿ ತಿಂತಾನೆ ...ಇದನ್ನು ಸುಮ್ನೆ ಕೂತಕೊಂಡು ನೋಡಬೇಕಾ ಸಾರ್?..." ಇವೆಲ್ಲವನ್ನು ಡಿಸೋಜ ಈ ಇಲಾಖೆಯಲ್ಲಿದ್ದುಕೊಂಡೇ ಬರೆದದ್ದು ಗಮನಾರ್ಹ. ಸುಮಾರು ಎರಡು ದಶಕಗಳ ಕಾಲ ಶರಾವತಿ ಯೋಜನೆ ಪ್ರದೇಶದಲ್ಲಿಯೇ ಸೇವೆ ಮಾಡುವಾಗ, ಅಲ್ಲಿ ನಿರ್ಮಾಣವಾದ ಶರಾವತಿಗೆ ಅಡ್ಡಲಾಗಿ ಲಿಂಗನಮಕ್ಕಿಯ ಬಳಿ ಒಂದು ದೊಡ್ಡ ಆಣೆಕಟ್ಟು, ತಳಕಳಲೆ ಹಳ್ಳಕ್ಕೆ ಅಡ್ಡಲಾಗಿ ತಳಕಳಲೆ ಆಣೆಗೆಕಟ್ಟು, ಜಲಾಶಯ, ವಿದ್ಯುದಾಗರಗಳು, ಸುರಂಗಗಳು, ರಸ್ತೆ ಸೇತುವೆ ಕಟ್ಟಡಗಳ ಕಟ್ಟೋಣವನ್ನು ಇವರು ತೀರಾ ಹತ್ತಿರದಿಂದ ಗಮನಿಸಿದ್ದಾರೆ. ಕಾಮಗಾರಿಕೆಯ ಬದುಕು ಒಂದು ರೀತಿಯದಾದರೆ, ಅವುಗಳ ಕಚೇರಿಗಳ ಚಿತ್ರ ಮತ್ತೊಂದು ರೀತಿ. ನಡೆದ, ಮತ್ತು ನಡೆಯುತ್ತಿರುವ ಮೋಸ, ವಂಚನೆ, ಶೋಷಣೆಗಳನ್ನು ಪ್ರತಿಯೊಂದು ಕಲ್ಲು ಮತ್ತು ಫೈಲುಗಳ ಮೂಲಕ ತೋರಿಸುತ್ತಾರೆ.

ಈ ಹಿನ್ನೆಲೆಯಿಂದ ಕೆಲವು ಪ್ರಮುಖ ಕಥೆಗಳ ಸಂಗಡ ಕಾದಂಬರಿಗಳೂ ಇವೆ, ಮುಖ್ಯವಾದದ್ದು 'ಮುಳುಗಡೆ' ಬೆಳಕನ್ನು ನೀಡಲೋಸುಗ ಕಟ್ಟಿದ ವಿದ್ಯುಚ್ಛಕ್ತಿ ಉತ್ಪಾದನೆಯ ಬೃಹತ್ ಯೋಜನೆಯ ಅಡಿಯಲ್ಲಿ ಬಹಳಷ್ಟು ಬದುಕುಗಳು ಕತ್ತಲೆಯಲ್ಲಿ ಕರಗಿಹೋದವು. ಜನ ಪ್ರಾಣಿ ತೋಟ ಗದ್ದೆ ಇಡೀ ಒಂದು ಜನಾಂಗದ ಜೀವಾಳವೇ ಮುಳುಗಿ ಹೋಯಿತು. ಆ ಭಾಗದ ಸಂಸ್ಕೃತಿಯ ಬೇರುಗಳು ಜಲರಾಶಿಯಲ್ಲಿ ಮುಳುಗಿ ಹೋದದ್ದನ್ನು ಡಿಸೋಜ ತುಂಬಾ ನೋವಿನಿಂದ ಚಿತ್ರಿಸಿದ್ದಾರೆ. ಸರ್ಕಾರದ ಕಣ್ಣಿಗೆ ಕಾಣದೆ ಹೋದ ಬದುಕುಗಳ ಮುಳುಗಡೆ ಮತ್ತು ಆ ಬದುಕುಗಳಿಗೆ ಅಂಟಿಕೊಂಡಿದ್ದ ಅನೇಕ ರಚನಾತ್ಮಕ ಮತ್ತು ಭಾವನಾತ್ಮಕ ಕ್ರಿಯೆಗಳು ಮುಳುಗುವದೇ ಇಲ್ಲಿಯ ವಸ್ತು. ಸುಮಾರು ನೂರಾಐವತ್ತು ಹಳ್ಳಿಗಳ ಅಂದರೆ ಅಲ್ಲಿಯ ಅಷ್ಟೊಂದು ಬದುಕುಗಳೂ ಎಲ್ಲೆಲ್ಲಿಗೋ ಸ್ಥಳಾಂತರಿಸಿದಾಗ ಆಗುವ

ನೋವಿನ ಆಳ ಅಳತೆಗೆ ಮೀರಿದ್ದು. "ಭುಜಕೀರ್ತಿ ಕಂಚಿದಾರು ಗೆಜ್ಜೆತಾಳ ಚಂಡೆ ನೆಲ್ಲಾ ಶರಾವತಿಗೆ ಎಸೆದು ಕೈ ಮುಗಿಯೋದೆ ಸೈ" ಎನ್ನುವ ಕಲಾವಿದರ ನಿಟ್ಟುಸಿರು ಒಮ್ಮೆ ನಮ್ಮನ್ನೆಲ್ಲಾ ಅಲ್ಲಾಡಿಸುತ್ತದೆ. ಶತಶತಮಾನಗಳ ಕಾಲ ಬದುಕಿ ಬಾಳಿದ ಆ ನೆಲ, ಆ ಆಕೃತಿ, ಆ ಸಂಸ್ಕೃತಿ ಜಲಸಮಾಧಿ ಆಗೋದು ನೋಡಿ ಲೇಖಕ ದಿಙ್ಮೂಡನಾಗಿ ಬರೆದ ಕಾದಂಬರಿಯಿದು. ಇದರ ಪರಿಣಾಮವೇ "ದ್ವೀಪ" ಮತ್ತು "ಒಡ್ಡು" ಕಾದಂಬರಿಗಳು ಮತ್ತು ಅನೇಕ ಕಥೆಗಳು. ಆ ಮುಳುಗಡೆ ಕ್ರಿಯೆ ಲೇಖಕನಲ್ಲಿ ಮಾಡಿದ ಗಾಢ ನೋವು ಎಷ್ಟೆಂದರೆ ಆ ಪ್ರಜ್ಞೆ ಎಂಬ ನದಿ ಇನ್ನೂ ಬೇರೆ ಬೇರೆ ಆಕೃತಿಯಲ್ಲಿ, ಕೃತಿಯಲ್ಲಿ ಅಭಿವ್ಯಕ್ತಿ ಆದರೆ ಆಶ್ಚರ್ಯ ವಿಲ್ಲ. "ದ್ವೀಪ" ಚಿಕ್ಕ ಕಾದಂಬರಿ. ಡಿಸೋಜರ ಅತ್ಯುತ್ತಮ ಕಾದಂಬರಿಗಳಲ್ಲಿ ಒಂದು. ಮುಳುಗಡೆಗೆ ಸಿಕ್ಕಿ ತೊಳಲಾಡಿದ ಒಂದು ಹೆಣ್ಣು, ಎರಡು ಗಂಡಿನ ಕಥೆ. ದಿನದಿಂದ ದಿನಕ್ಕೆ ನೀರು ಏರುತ್ತಿದ್ದಾಗ ಆ ಹಳ್ಳಿಯ ಒಂದು ಹೆಣ್ಣು ಎರಡು ಗಂಡು ಅವರ ಸಂಗಡ ನೀರಿಗೆ ಹೆದರಿ ಹಳ್ಳಿಗೆ ನುಗ್ಗಿರುವ ಒಂದು ಹುಲಿ. ಮನುಷ್ಯ ಸ್ವಭಾವದ ಮೇಲೆ ಬೆಳಕು ಚೆಲ್ಲುವ ಕಾದಂಬರಿ. ಇದೊಂದು ಕಾವ್ಯ ಸುಖವನ್ನು ನೀಡುವ ಕಾದಂಬರಿ. "ಒಡ್ಡು" ಮುಳುಗಡೆ ಕುರಿತಂತೆ ಮೂರನೆ ಕಾದಂಬರಿ. ಹಿಂದಿನದೆ ಭೂಮಿಕೆ. ಅದೇ ನೀರು ಊರು ಗುಡ್ಡ ಬೆಟ್ಟ ಮರ ಕಾಡು ಎಲ್ಲ. ಆದರೆ ಇಲ್ಲಿ ಆಗಿರೋ ಬದುಕಿನ ವಿಶ್ಲೇಷಣೆಯೇ ಬೇರೆ. ಹನುಮಂತಪ್ಪನ ಜಮೀನು ಮುಳುಗಡೆ ಆಗದೆ ಉಳಿಯಿತು. ಆದರೆ ಆ ನೆಲ ಆತನಿಗೆ ಮಾನಸಿಕವಾಗಿ ಕಾಡುತ್ತದೆ. ಇದರಿಂದ ಮುಂದೆ ಆತ ಒಡ್ಡಿಸಿಕೊಳ್ಳುವ ಅನೇಕ ಸಮಸ್ಯೆಗಳನ್ನು ವಿಶ್ಲೇಷಿಸುವ ಕಾದಂಬರಿ ಇದು.

ಶರಾವತಿ, ಬೆಳಕು ಕೊಟ್ಟಂತೆ, ಡಿಸೋಜರಿಂದ ಸಾಕಷ್ಟು ಕಥೆ ಕಾದಂಬರಿ ಲೇಖನಗಳನ್ನೂ ಕೊಡಿಸಿದೆ. ಮೊದಲೆ ಹೇಳಿದ ಹಾಗೆ. ಇವರ ಅನೇಕ ಕಥೆಗಳಲ್ಲಿ ನಿರ್ದಿಷ್ಟ ಪ್ರಾದೇಶಿಕತೆ ಇದೆ. ಶರಾವತಿ ಜಲನಯನ ಪ್ರದೇಶ ಮತ್ತು ಇದರ ಆಸುಪಾಸಿನ ಪ್ರದೇಶ, ಚರ್ಚಿನ ಸುತ್ತಮುತ್ತ ಮುಖ್ಯವಾಗಿ ಸಾಗರದ ಗ್ರಾಮೀಣ ಪ್ರದೇಶಗಳಲ್ಲಿರುವ ದೀವರು (ಈಡಿಗರು) ಮತ್ತು ಹಸಲರು ಎಂಬ ಗುಡ್ಡಗಾಡು ಜನಾಂಗದ ಹಿನ್ನೆಲೆಯಲ್ಲಿ ಸುಮಾರು ಇಪ್ಪತ್ತಕ್ಕೂ ಹೆಚ್ಚಿನ ಕೃತಿಗಳು ಬಂದಿವೆ. ಇವೆಲ್ಲಾ ಲೇಖಕನಿಗೆ ನೇರವಾಗಿ ನಾಟಿದ್ದು. ಅಲ್ಲಿಯೇ ಓಡಾಡಿ ಬೆರತು ಅವರ ಸಾಮೀಪ್ಯವನ್ನು ಸಂಪಾದಿಸಿದ್ದು. ಹೀಗಾಗಿ ಇವೆಲ್ಲಾ ಒಂದು ರೀತಿಯ ಪ್ರಾದೇಶಿಕತೆಯ ಸೊಡರಿನಲ್ಲಿ ಬಂದರೂ ಒಟ್ಟು ಪರಿಣಾಮದಲ್ಲಿ ಪ್ರಾದೇಶಿಕತೆಯನ್ನು ಮೀರಿ ನಿಲ್ಲುವಂತಾದ್ದು. ಮಲೆನಾಡಿನ ಬರಹಗಾರರಲ್ಲಿಯೇ ಒಂದು ಪರಂಪರೆ ಇದೆ. ಈ ನೆಲದಲ್ಲಿ ಚಿಗುರುವ ಪ್ರತಿಯೊಂದು ಮೊಳಕೆಯನ್ನು ಪ್ರೀತಿಸುವ ಗುಣ. ಈ ಪರಂಪರೆಯ ಶ್ರೇಷ್ಠತೆಯನ್ನು ಕುವೆಂಪುರವರ ಸಾಹಿತ್ಯದಲ್ಲಿ ಸೊಂಪಾಗಿ ಕಾಣಬಹುದು. ಒಮ್ಮೆಲೆ

ಮಲೆನಾಡಿನ ಎಲ್ಲಾ ಪರಿಸರ, ಸಂಸ್ಕೃತಿಗಳೇನಾದರೂ ನಾಶವಾದರೆ. ನೆನಪಿಸಿಕೊಳ್ಳಲು ಅದರ ಸಂಪೂರ್ಣ ಪಡಿಯಚ್ಚು ದೊರೆಯುವದು ಕೇವಲ ಕುವೆಂಪುರವರ ಸಾಹಿತ್ಯದಲ್ಲಿಯೇ. ಇಲ್ಲಿಯ ಎಲ್ಲಾ ಬರಹಗಾರರು ಈ ರಮ್ಯತೆಯನ್ನಿಟ್ಟುಕೊಂಡು ಬಂದಿದ್ದಾರೆ. ಇದರಲ್ಲಿ ಡಿಸೋಜರದು ಹೆಚ್ಚಿನ ಕೊಡುಗೆ. ಸಾಮಾನ್ಯವಾಗಿ ಇವರ ಎಲ್ಲಾ ಕಥೆ ಕಾದಂಬರಿಗಳಲ್ಲಿ ಮರಗಿಡಬಳ್ಳಿಯ ನೆರಳು ಇದ್ದೆ ಇರುತ್ತದೆ.

ಶರಾವತಿ ಜಲಾನಯನ ಪ್ರದೇಶದಿಂದ ಬಂದ ನಾಲ್ಕು ಕಾದಂಬರಿ ಮತ್ತು ಅನೇಕ ಕಥೆಗಳಲ್ಲಿ ಬದುಕಿನ ಸಂಗಡವೇ ಹರಿದು ಬಂದಿರುವ ಮತ್ತೊಂದು ತೊರೆ ಪರಿಸರದ್ದು. ಪರಿಸರದ ಮುಳುಗಡೆ ಇವರನ್ನು ಕಾಡಿಸುತ್ತಲೆ ಇದೆ, ಹಳ್ಳಿಗಾಡಿನ ಮರಬಳ್ಳಿ, ಹಳ್ಳಕೆರೆ ನೀಡುವ ಸಮಾಧಾನವನ್ನು ಚಿತ್ರಿಸುವಾಗ ಡಿಸೋಜರಿಗೆ ಎಲ್ಲಿಲ್ಲದ ಸಂಭ್ರಮ. ಸಾಮಾನ್ಯವಾಗಿ ನಮ್ಮೆಲ್ಲ ಕಥೆ ಕಾದಂಬರಿಗಳಲ್ಲಿ ಮರಬಳ್ಳಿ ಸಂಸ್ಕೃತಿ ಬರುವದು ಕಥೆಯ ಹಿನ್ನಲೆಯಲ್ಲಿ ಮಾತ್ರ. ಈ ಹಿನ್ನಲೆ ಆ ಕಥೆಗೆ ಪೂರಕವಾಗಿ ನಿಲ್ಲುತ್ತದೆ. ಅವರ ಪರಿಸರವೇ ಪ್ರಧಾನವಾಗುವ ಕಥೆ ಕಾದಂಬರಿಗಳು ನಮ್ಮಲ್ಲಿ ಕಡಿಮೆ.

"The old man and the sea" ದಂತಹ ಕಾದಂಬರಿಯಲ್ಲಿ ಸಮುದ್ರ ಸಹಾ ಒಂದು ಪಾತ್ರವೆ. ಸರಿ. ಈ ರೀತಿ ಪ್ರಕೃತಿಯೇ ಮುಖ್ಯ ಪಾತ್ರವಾಗುವ ಕಥೆ ಕಾದಂಬರಿಗಳು ನಮ್ಮಲ್ಲಿ ಅಷ್ಟಿಲ್ಲ. ಈ ದಿಸೆಯಲ್ಲಿ ಡಿಸೋಜರ "ಕುಂಜಾಲು ಕಣಿವೆಯ ಕೆಂಪು ಹೂ" ಒಂದು ವಿಶಿಷ್ಟವಾದ ಕಾದಂಬರಿ. ನಮ್ಮ ಬದುಕು ಸರಳವೂ ಸುಖಮಯವೂ ಆಗುವಲ್ಲಿ ಅತ್ಯಾಧುನಿಕ ಅವಿಷ್ಕಾರಗಳು ಸಂಶೋಧನೆಗಳು ವಹಿಸಿರುವ ಪಾತ್ರ ಅಷ್ಟಿಷ್ಟಲ್ಲ. ಈ ಸುಖದ ಬೆನ್ನು ಹತ್ತಿಕೊಂಡ ಹಿಂದಿನವರು ರೂಢಿಸಿಕೊಂಡಿದ್ದ ಕೆಲ ಮೌಲ್ಯಗಳನ್ನು ಮುಖ್ಯವಾಗಿ ಪ್ರಕೃತಿ ಪ್ರೇಮ ಮತ್ತು ಜೀವನ ಶ್ರದ್ಧೆ, ಆಸಕ್ತಿಗಳನ್ನು ನಾವು ಕಳೆದುಕೊಂಡಿದ್ದೇವೆ. ಈ ತೊಳಲಾಟದ ವಸ್ತು ಈ ಕಾದಂಬರಿಯಾಗಿದೆ. ಹತ್ತು ವರ್ಷಕ್ಕೊಮ್ಮೆ ಹೂಬಿಟ್ಟು ಕೇವಲ ಹತ್ತು ದಿನ ಮಾತ್ರ ಇದ್ದು ಬಾಡಿಹೋಗುವಂತಹ ಒಂದು ಅಪರೂಪ ಗಿಡ ಕುಂಜಾಲು ಕಣಿವೆಯಲ್ಲಿ ಇದೆ ಅಂತ ತಿಳಿದು ರಾಮರಾಯರು ಮಾಡಿದ ಒಂದು ಯಾತ್ರೆ. ಪ್ರಕೃತಿಯ ಶ್ರೀಮಂತಿಕೆಯಲ್ಲಿ ಪ್ರಯಾಣ ಮಾಡಿ, ಆ ಹೂವಿನ ಅದ್ಭುತ ಸೌಂದರ್ಯವನ್ನುಂಡ ರಾಮರಾಯರ ಬದುಕಿನ ಮೌಲ್ಯಕ್ಕೂ ಕೇವಲ ಐವತ್ತು ವರ್ಷಗಳ ಅಂತರದಲ್ಲಿ ರಾಮರಾಯರ ಮಗ ಅನಂತನು ಮಾಡಿದ ಅದೇ ಪ್ರಯಾಣಕ್ಕೂ ಅಜಗಜಾಂತರ ವ್ಯತ್ಯಾಸ. 'ನಾವೇನೆಲ್ಲಾ ಕಳೆದುಕೊಂಡಿದ್ದೇವೆ, ' ಕಳೆಯುತ್ತಿದ್ದೇವೆ ಎಂಬುದನ್ನು ಡಿಸೋಜ ಕಲಾತ್ಮಕವಾಗಿ ಹೇಳುತ್ತಾರೆ, ರಾಮರಾಯರು "ಸೊಂಟಕ್ಕೆ ಕತ್ತಿ ಕೈಯಲ್ಲಿ ಜತೆ ಪಂಜಿ ಅಂಗಿ, ನೀರಿನ ಕುಪ್ಪಿ, ಅಕ್ಕಿ, ಮೆಣಸಿನಕಾಯಿ, ಬೆಂಕಿ-ಪೊಟ್ಟಣ

ಒಂದೆರಡು ಪಾತ್ರೆಗಳು, ಕಾಲಿಗೆ ಮೆಟ್ಟು, ತಲೆಗೆ ಕಂಬಳಿ ಟೋಪಿ ಹಾಕಿಕೊಂಡದ್ದು ಕೂಡ ಕಂಬಳಿವಗಲೆ" ಈ ರೂಪದಲ್ಲಿ ಹೊರಟ ರಾಮರಾಯ ದಾರಿಯುದ್ದಕ್ಕೂ ನೋಡಿದ್ದು ಬರೀ ಕಾಡೇ ಕಾಡು, ಹಸಿರಿನ ರಾಶಿ, ಆನೆಗಳ ಹಿಂಡು, ನವಿಲುಗಳ ಲಾಸ್ಯ, ಹಕ್ಕಿಗಳ ಚಿಲಿಪಿಲಿ ಸದ್ದು, ಮರಗಳು ಗಾಳಿಗೆ ತೂಗುವ, ತೂಗುವಾಗ ರೆಂಬೆ ಕೊಂಬೆಗಳು ತಿಕ್ಕಿ ತೀಡಿ ಸದ್ದು ಮಾಡುವ ನಾದ, ನೋಡುತ್ತಾ ಹೊರಟ ರಾಮರಾಯ ತಟ್ಟನೆ ನಿಂತ."... ಅತ್ತ ಇತ್ತ ಎರಡೂ ಕಡೆ ಪೊದೆಗಳು ಗಿಡಗಳು, ನಡುವೆ ಗೇಣಗಲ ದಾರಿ. ಈ ದಾರಿಯ ಮೇಲಷ್ಟೆ ಬಿಸಿಲು, ಈ ಬಿಸಲಲ್ಲಿ ಏನದು? ಕೆಂಪು ಹಳದಿಯ ಪಟ್ಟೆ, ಬೆಂಕಿ ಉಗುಳುವ ಕಣ್ಣು, ಬಾಯಿ ತೆರೆದಾಗ ಕಂಡ ಕೋರೆ ಹಲ್ಲುಗಳು... ರಾಯರು ದಿಟ್ಟತನದಿಂದ ಹುಲಿಯನ್ನೇ ನೋಡಿದರು. ಮೈ ಬಾಗ ಲಿಲ್ಲ, ಕಣ್ಣುರೆಪ್ಪೆ ಮಿಟುಕಸಲಿಲ್ಲ, ದೇಹ ಅಲುಗಾಡಲಿಲ್ಲ, ಹುಲಿಯನ್ನು ಸಹಜವಾಗಿ ಪ್ರೀತಿಯಿಂದ ಸ್ನೇಹದಿಂದ ಪ್ರಕೃತಿ ಸಹಜವಾದ ಒಂದು ದೃಶ್ಯ ನೋಡುತ್ತಿದ್ದೇನೆ ಎಂದಂತೆ ನೋಡುತ್ತಾ ನಿಂತರು. ಹಕ್ಕಿಗಳ ಕಲರವ ನಿಲ್ಲಲಿಲ್ಲ, ಗಾಳಿಯ ಸುಳಿದಾಟ ನಿಲ್ಲಲಿಲ್ಲ. ಗಿಡಗಳು ತೊನೆದಾಡುತ್ತಲೆ ಇದ್ದವು, ಮರಗಳು ತೂಗಾಡುತ್ತಲೆ ಇದ್ದವು, ರಾಮರಾಯ ನಿಂತೆ ಇದ್ದರು. ಹುಲಿ ಆಕಳಿಸಿತು. ಅತ್ತ ಇತ್ತ ಒಂದು ಬಾರಿ ನೋಡಿತು; ಅಹಂಕಾರದಿಂದ ನಾಲ್ಕು ಕಾಲುಗಳ ಮೇಲೆ ನಿಂತು ನಿಧಾನವಾಗಿ ಅಷ್ಟೇ ಗಂಭೀರವಾಗಿ ಪಕ್ಕದ ಕುನ್ನೇರಲ ಪೊದೆಯನು ಹೊಕ್ಕಿತು."... ಅವರ ಪಟ್ಟೆಗಳ ವೈಖರಿ, ಬಣ್ಣ, ನಡಿಗೆಯ ರೀತಿ, ಕಾಲನ್ನು ಊರುವ ಭಂಗಿ, ಬಾಲಬೀಸುವ ವೈಖರಿ, ಹಸಿರು ಗಿಡಗಳ ನಡುವೆ ಅದರ ಕೆಂಪು ಹಳದಿ ಬಳಿ ಮೈ ಸಾಗಿ ಹೋಗುವಾಗ ವರ್ಣರಂಜಿತ ಮೆರವಣಿಗೆ ಇಂತಹ ಸುಂದರ ಸನ್ನಿವೇಶಗಳ ಹತ್ತಾರು ಚಿತ್ರಗಳು ಇಲ್ಲಿ ಇವೆ. ಆನೆಯ ಹಿಂಡಿನ ಗದ್ದಲದ ಸಂಭ್ರಮವಂತೂ ಕತೆಗೆ ಹೆಚ್ಚಿನ ಒಲುವನ್ನು ಕೊಡು ತ್ತದೆ. ಆ ಪ್ರಯಾಣ ದಾರಿತುಂಬ ನೋಡಿದ ಆ ನೈಜ್ಯ ದೃಶ್ಯಗಳು, ಆ ಕಣಿವೆ, ಕುಂಜಾ ಲವ ಆ ಗಿರಿಜನ,ಕುಂಜಾಲು ಹೆಣ್ಣು ಮಕ್ಕಳ ನೈಜ ಸೊಬಗು, ಆತಿಥ್ಯ ಒಲವು, ಪ್ರಕೃತಿಯ ಆ ಸಮಾಧಾನ!ಕೊನೆಯಲ್ಲಿ ರಾಯರು ಕಂಡ ಆ ಕೆಂಪು ಹೂ.... "ಎರಡು ಎರಡೂವರೆ ಅಡಿ ಎತ್ತರದ ಗಿಡ ಸಣ್ಣ ಪೊದೆಯಂತೆ ಅಷ್ಟಗಲ ಹರಡಿತ್ತು. ವಿಚಿತ್ರ ವೆಂದರೆ ಗಿಡ ಸಣ್ಣ ಪೊದೆಯಂತೆ ಅಷ್ಟಗಲ ಹರಡಿ ಒಂದೇ ಒಂದು ಎಲೆಯೂ ಇರ ಲಿಲ್ಲ. ಬರೀ ಹೂ ಗಿಡದ ತುಂಬಾ ಹೂವೇ ಹೂವು, ಸಣ್ಣ ಸಂಪಿಗೆ ಹೂವಿನ ಹಾಗೆ ಆ ಹೂವಿನ ಆಕಾರ, ಕಡ್ಡಿಕಡ್ಡಿಯಂತಿರುವ ಎಸಳುಗಳು, ಈ ಎಸಳುಗಳು ಮೃದು ಕೋಮಲ. ರೇಶ್ಮೆಯ ನುಣುಪು. ಗಿಡವು ಸಾವಿರ ಟಿಸಲುಗಳಾಗಿ ಒಡೆದು ಕೊಂಡಿತ್ತು. ಪ್ರತಿ ಟಿಸಿಲಿನ ದಂಟಿನ ತುದಿಯಲ್ಲಿ ತಿಳಿ ಹಸಿರಿನ ಪುಷ್ಪಪೀಠ, ಈ ಪೀಠದೊಳಗೆ ಅಡಕವಾಗಿ ಕೀಳಿತ ನುಣುಪಾದ ಎಸಳುಗಳು, ಗಿಡದಲ್ಲಿ ಹಸಿರು ಎಲೆ ಇಲ್ಲದಿದ್ದರಿಂದ ಇಡೀ ಗಿಡ ಕಂಪಿಸಿ ಬೆಂಕಿ ನಾಲಿಗೆ ಅತ್ತಿತ್ತ ಹೊರಳಿದ ಹಾಗೆ ಕಂಡು ಬಂದು ಆ ದೃಶ್ಯ

ಚೇತೋಹಾರಿಯಾಗಿ ಕಾಣುತ್ತಿತ್ತು." ಇದು ತಂದೆ ರಾಮರಾಯರು ನೋಡಿದ ಕುಂಜಾಲು ಕಣಿವೆಯ ಕೆಂಪು ಹೂ. ಇಲ್ಲಿ ಡಿಸೋಜ ಪರಿಸರ, ಬದುಕಿನ ಸೌಂದರ್ಯ ಪರಿಸರದ ಶಾಂತಿ ಸಮಾಧಾನವನ್ನು ಕೊಡುತ್ತಾರೆ.

ಮಗ ಅನಂತನ ಪ್ರಯಾಣದ ವೈಖರಿಯೇ ಬೇರೆ. ಈತ ಕುಂಜಾಲಿಗೆ ಜೀಪೊಂದರಲ್ಲಿ ಕೂತು ಹೋಗುವಾಗ ನೋಡಿದ ದೃಶ್ಯ... "ಜೀಪು ಕಣಿವೆ ಪ್ರವೇಶಿಸಿತು. ಜೀಪು ಹೋಗುವಾಗ ದಾರಿ. ಹಿಂದೆ ಅಲ್ಲಿ ಇದ್ದ ಕಲ್ಲು ಬಂಡೆಗಳನ್ನೆಲ್ಲಾ ತೆಗೆದು ಕಲ್ಲು ತುಂಬಿ ಮಟ್ಟಸ ಮಾಡಿದ್ದರು... ಗಿರಿಸಂಗಮದ ಬಳಿ ಬಾಳೆ ಹೊನ್ನೂರಿಗೆ ಅಡ್ಡಲಾಗಿ ಒಂದು ಅಣೆಕಟ್ಟು ಕಟ್ಟುವ ವಿಚಾರ ಸರಕಾರದ್ದು. ಇದರಿಂದಾಗಿ ಸುಮಾರು ಹದಿನೈದು ಮೈಲುಗಳ ವರೆಗೆ ನದಿಯ ನೀರು ಮಡುವಾಗಿ ನಿಲ್ಲುತ್ತದೆ... ಈಗ ಕುಂಜಾಲರು ಯಾರೂ ಅಧಿಕ ಸಂಖ್ಯೆಯಲ್ಲಿ ಇಲ್ಲ. ಕೆಲ ಕುಂಜಾಲಿಗಳು ಕೆಟ್ಟು ಪಟ್ಟಣ ಸೇರಿದ್ದಾರೆ. ಇಲ್ಲಿ ಶ್ರೀಮಂತರು ಈ ಹೆಣ್ಣುಗಳ ಬಣ್ಣ, ಚೆಲುವಿಗೆ ಮನಸೋತು ಇವರಿಗೆ ತಪ್ಪು ದಾರಿ ಎಳೆದಿದ್ದಾರೆ ... ಅಲ್ಲಿ ಬಂಡೆಗಳನ್ನು ಚಪ್ಪಡಿ ಕಲ್ಲುಗಳನ್ನಾಗಿ, ಜಲ್ಲಿಯನ್ನಾಗಿ ಮಾಡಿ, ಅಣೆಕಟ್ಟಿಗೆ ಉಪಯೋಗಿಸುವ ಸೈಜುಗಲ್ಲಾಗಿ ಪರಿವರ್ತಿಸಲು ಸಾಧ್ಯವೇ ಎಂಬುದನ್ನು ಪರೀಕ್ಷಿಸಲು ಕೂಡ ಒಂದು ತಂಡ ಬಂದಿತ್ತು. ಇಲ್ಲಿ ಕಣಿವೆ ವ್ಯವಸಾಯ ಮಾಡುವ ಬಗ್ಗೆ ವರದಿ ಸಿದ್ಧಪಡಿಸಲು ಕೆಲವರು ಬಂದರು. ಈ ಕಣಿವೆಯಲ್ಲಿ ದರೋಡೆಕೋರರ ಒಂದು ಗುಂಪನ್ನು ಸೃಷ್ಟಿಸಿ ಒಂದು ಚಲನ ಚಿತ್ರವನ್ನು ತೆಗೆಯಲಾಯಿತು" ಇವೆಲ್ಲಾ ಅನಂತನ ಬದುಕಿನ ಅನುಭವ. ಈ ಬದಲಾವಣೆಯನ್ನು ತೀರಾ ಕಳವಳದಿಂದ ಕಥೆಗಾರ ಚಿತ್ರಿಸುತ್ತಾನೆ. ಅನಂತ ಕುಂಜಾಲು ಕಣಿವೆಯಲ್ಲಿ ನೋಡಿದ್ದಾದರೂ ಏನೂ?... "ಬಂಡೆ ಹತ್ತಿದೆ... ಬಗ್ಗಿ ನೋಡಿದ್ರು ಏನಿದೆ ಅಲ್ಲಿ? ಕುರುಚಲಗಿಡ, ದತ್ತೂರಿನಗಿಡ, ಎಕ್ಕದ ಗಿಡ, ನೆಗ್ಗಿಮುಳ್ಳು, ಜಾಲಿಮುಳ್ಳು, ಪಾರ್ಥೇನಿಯಂ, ಯುಪಟೋರಿಯಂ... ಹೆಬ್ಬಂಡೆಯ ಮೇಲೆ ಕೂತು ಅತ್ತೆ. ಜೀವನದಲ್ಲಿ ಅತ್ಯಮೂಲ್ಯವಾದದ್ದನ್ನು ಕಳೆದುಕೊಂಡವರು ಅತೀವ ಸಂಕಟ ಪಡುವಂತೆ ನಾನು ಸಂಕಟಪಟ್ಟೆ." ಇದು ಕತೆಗಾರನ ಸಂಕಟ ಕೂಡ ಹೌದು. ಪರಿಸರದ ಮೇಲೆ ಮನುಷ್ಯ ಮಾಡಿದ ವ್ಯಭಿಚಾರವಿದು. ಈ ಕತೆ ಡಿಸೋಜರ ಕಲ್ಪನೆಯ ಕೂಸಾದರೂ ಬದುಕಿನಲ್ಲಿ ನಾವು ಕಳೆದುಕೊಳ್ಳುತ್ತಿರುವ ಮೌಲ್ಯಗಳ ಸತ್ಯ ಇಲ್ಲಿದೆ. ಇವರ "ಕಾಡಿನ ಬೆಂಕಿ" ಕಾದಂಬರಿಯಲ್ಲಿ ಬರುವ ಕಾಡು ಒಂದು ಹಚ್ಚಹಸಿರ ಸ್ಥಿತಿಯನ್ನೇ ನೀಡುತ್ತದೆ. ಮನೋವೈಜ್ಞಾನಿಕ ಕತೆಗೆ ಈ ಕಾಡು ಕೊಡುವ ತಂಪು ಮತ್ತು ಕಾವು ವಿಶಿಷ್ಟವಾದದ್ದು.... "ಒಂದು ಜಲಪಾತದ ಸುತ್ತ" ಕಾದಂಬರಿಯಲ್ಲಿ ಜೋಗದ ಆಸುಪಾಸಿನ ಅರಣ್ಯ ಶ್ರೀಮಂತಿಕೆಯ ಮತ್ತು ದಟ್ಟವಾಗಿ ಬೀಳುತ್ತಿದ್ದ ಜಲಪಾತದ ಅರ್ಥಪೂರ್ಣ ವಿಶ್ಲೇಷಣೆ ಇದೆ. "ಮುಂಜಿನ ಕಾನು" ಮತ್ತು "ಶಿವನ ಡಂಗುರ" ಕಾದಂಬರಿಗಳಲ್ಲಿ ಬರುವ ಹಸಲರು ಎಂಬ ಗಿರಿಜನ

ಮತ್ತು ಅಲ್ಲಿಯ ಸವರ್ಣೀಯ ಬದುಕುಗಳ ಮಧ್ಯೆ ಬರುವ ಒಂದು ಸಂಕೀರ್ಣ ದ್ವಂದ್ವವನ್ನು ಪರಿಸರದ ಹಿನ್ನಲೆಯಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ. ಮಕ್ಕಳ ಕಾದಂಬರಿಗಳಾದ "ಆನೆ ಹುಡುಗ ಅಬ್ದುಲ್ಲಾ" "ಆನೆ ಬಂತೊಂದಾನೆ" "ನೇತ್ರಾಣ ಗುಡ್ಡಕ್ಕೆ ಯಾತ್ರೆ" "ಬೆಳಕಿನೊಡನೆ ಬಂತು ನೆನಪು" ಗಳೆಲ್ಲ ತಮ್ಮ ತಮ್ಮ ಕಥೆಗಳ ಸಂಗಡ ಪರಿಸರದ ಕಥೆಗಳನ್ನು ಹೊಂದಿವೆ. ಈ ದಿಸೆಯಲ್ಲಿ "ಮರ" ಕಥೆ ತುಂಬಾ ವಿಶಿಷ್ಟ. ಬೊಂಬಾಯಿಗಳಂತಹ ನಗರದಲ್ಲಿ ಮುಂದೆ ಮರಗಳ ಸ್ಥಿತಿ ಏನಾಗಬಹುದೆಂಬ ಮಾರ್ಮಿಕವಾದ ಕಥೆಯಿದು. ಮಲೆನಾಡಿನ ಗ್ರಾಮೀಣ ಬದುಕಿನಿಂದ ಬಂದ ಕಥೆಗಳಾದ... "ಓಡಿಹೋಗುವದನ್ನು ಹುಡುಕ ಹೊರಟವರು" "ಹರಿಕಂತಾರರ ಸಣ್ಣ" "ಹರಿವ ನೀರಿನ ಮಟ್ಟ" "ಹಸೆ ಬರೆಯಲು ಬಂದವಳು" "ಹಡೆ" "ತಾಯಿ ಗವರವ್ವನ ಕರೆವೋಕಿ" "ಕುರ್ಚಿ" ಮತ್ತು "ಬೆಂಕಿ" ಕಥೆಗಳು ಡಿಸೋಜರ ಪರಿಸರ ಪ್ರೀತಿ ಮತ್ತು ಪ್ರಜ್ಞೆಗೆ ಒಳ್ಳೆಯ ಉದಾಹರಣೆ.

ಈಗ ಹುಟ್ಟಿಕೊಂಡಿರುವ ಪರಿಸರದ ಚಳುವಳಿಗಿಂತಲೂ ಮೊದಲು ಇವರು ತನ್ನದೇ ಆದ ರೀತಿಯಲ್ಲಿ ಪರಿಸರ ಪ್ರೀತಿ, ಪರಿಸರ ಪ್ರಜ್ಞೆಯನ್ನುಂಟು ಮಾಡುತ್ತಲೇ ಇದ್ದಾರೆ. ಇವರ ಕಥೆ ಕಾದಂಬರಿಗಳಲ್ಲದೆ ನೂರಾರು ಬಿಡಿ ಲೇಖನಗಳಲ್ಲಿ ಪ್ರಕೃತಿ ಸಂಪತ್ತು ಮತ್ತು ಕಳೆದು ಹೋಗುತ್ತಿರುವ ಬದುಕಿನ ಮೌಲ್ಯಗಳಿಗೆ ಒತ್ತನ್ನು ಕೊಡುತ್ತಲೇ ಬಂದಿದ್ದಾರೆ. ಇವರು ತಮ್ಮ ಲೇಖನಗಳಿಗೆ ಆರಿಸಿಕೊಳ್ಳುವ ವಸ್ತುಗಳು ಸಹಾ ಅದೇ ದನಿಯದು. ಕಾಡಿನ ಹೂ, ಕಾಡಿನ ಹಣ್ಣು, ಹಸೆಬರೆಯುವದು, ಜೋಗೇರ ಪದಗಳು, ಹಳ್ಳಿಯ ಹಬ್ಬ ಹರಿದಿನಗಳು, ಜಾತ್ರೆ ಸಂತೆಗಳು, ಗ್ರಾಮಿಗರ ರೀತಿ ರಿವಾಜು, ಕೋಟೆ ಕೊತ್ತಲು, ಹಳೆಗಾಡಿಗುಡಿ, ಬಿತ್ತನೆ ಕೆತ್ತನೆ, ನೇಗಿಲು, ಮೊಗ, ಹಳೆ ದೇವಾಲಯಗಳ ಗಂಟೆ, ಕಿಟಕಿ, ಬಾಗಿಲು, ಅಜ್ಜ ಅಜ್ಜಿಯರ ನವಿರಾದ ಕನಸು ನೆನಪುಗಳು, ಪ್ರಾಣಿ ಪಕ್ಷಿ, ಕೆರೆಕಾಲುವೆ. ಮೀನು ಬೇಟೆ ಹಂಡೆಸ್ನಾನ, ಚೆಂಡೆ ಡೊಳ್ಳು—ಇಂತಹ ನೂರಾರು ವಸ್ತುಗಳ ಮೂಲಕ ಬಂದ ಸುಂದರವಾಗಿರುವ, ಗಟ್ಟಿ ಮೌಲ್ಯಗಳನ್ನು ಎತ್ತಿ ಹಿಡಿಯುತ್ತಲೇ ಬಂದಿದ್ದಾರೆ, ಅದು ಮರಗಿಡ ಬಳ್ಳಿ ಪರಿಸರವೇ ಆಗಲಿ, ಕಲ್ಲು ಮರಳು ಜೆಲ್ಲಿಯ ಕ್ಷೇತ್ರವಾಗಲಿ, ಚರ್ಚಿನ ಆಜುಬಾಜಾಗಲಿ. ಡಿಸೋಜರು ಹುಡುಕುವದು ಬರೀ ಮರ, ಸಿಮೆಂಟು, ಶಿಲುಬೆಯನ್ನಲ್ಲ. ಇಲ್ಲೆಲ್ಲಾ ಹರಿಯುವ ಮನುಷ್ಯ ಬದುಕಿನ, ದೀರ್ಘ ಕಾಲಿಕ ಮೌಲ್ಯಗಳ ಹುಡುಕಾಟವೇ ಈ ಲೇಖಕನ ಪ್ರಯತ್ನ.

ಈ ಮೂರು ಕ್ಷೇತ್ರ ಇವರಿಗೆ ಸಿಕ್ಕಿದ್ದು ಹುಟ್ಟಿನಿಂದ, ವೃತ್ತಿಯಿಂದ, ಪ್ರಕೃತಿಯಿಂದ. ಇಲ್ಲಿರುವ ಬದುಕಿನ ಸ್ತರವಿಸ್ತಾರದಲ್ಲಿ ಹರಿಯುತ್ತಿರುವ ಮನುಷ್ಯನ ಎಲ್ಲಾ ಮೂಲಭೂತ ಜೀವಜಲದ ವಿಶ್ಲೇಷಣೆಯೇ ಡಿಸೋಜರ ಬರಹ. ●

# ಸಂಕ್ರಮಣ ಸಾಹಿತ್ಯ ಸ್ಪರ್ಧೆ : ೧೯೯೨

## ಫಲಿತಾಂಶ

(ಬಹುಮಾನಿತರ ಹೆಸರು ಆಕಾರಾದಿಯಲ್ಲಿ)

| | | |
|---|---|---|
| **ಸಣ್ಣಕತೆ** | ಗೌರೀಸುತ ಗಣೇಶ | **ಹೆಣಾ** |
| | ಸೋಮಣ್ಣ ಹೊಂಗಹಳ್ಳಿ | **ಸೆಳತ** |
| **ಲಲಿತ ಪ್ರಬಂಧ** | ವೈ. ಬಿ. ಹಿಮ್ಮಡಿ | **ದೇವರು 'ದಯಾಮಯ'!** |
| **ಕಾವ್ಯ** | ಎಂ. ಬಿ. ಅಡ್ನೂರ | **ಸಂವಾದ** |
| | ಅಮರೇಶ ಕುಂಬಾರ | **ನಮ್ಮೂರ ಕಪ್ಪುನದಿ ಮತ್ತು ಅರಣ್ಯ** |
| | ಅಯ್ಯಪ್ಪಯ್ಯ ಹುಡಾ | **ರಾಮ: ನಮಗೆ ಆದರ್ಶ** |
| | ಗಣಪತಿ ದಿವಾಣ | **ಕಾಲ ಮಣ್ಣಾಗಿದೆ** |
| | ಚನ್ನಪ್ಪ ಕಟ್ಟಿ | **ಪ್ರಶ್ನೋತ್ತರ** |
| | ಸಾ. ದಯಾ | **ಫುಟುಪಾತಿನ ಮೇಲೆ** |
| | ರಾಜಶೇಖರ ಪಾಟೀಲ | **ಗೆಳೆಯನಿಗೆ** |
| | ಎಂ. ಎಚ್. ಲಕ್ಷ್ಮೀನರಸಮ್ಮ | **ಚೌಕಟ್ಟಿನೊಳಗೆ** |
| | ಲತಾ ರಾಜಶೇಖರ | **ದಿನದ ಚಿತ್ರ** |
| | ವಾಸುದೇವ ನಾಡಿಗ | **ಈ ಅವಸ್ಥೆಗಳು!** |
| | ವಿದ್ಯಾಧರ ಮುತಾಲಿಕ ದೇಸಾಯಿ | **ಅವ್ಯಕ್ತ** |
| | ಶೇಖರ ಲದವಾ | **ಬೆಳದಿಂಗಳ ಝುಳಾ** |
| | ಶ್ರೀಮತಿ | **ಡಿಪಾರ್ಟಮೆಂಟ್** |
| | ಎ. ಸದಾನಂದ ಹೆಬ್ಬಾರ | **ಸತ್ಯಗೀತೆ** |
| | ಬಿ. ಕೆ. ಸರಸ್ವತಿ | **ಏನ ಹುಡುಕುತ್ತಿದ್ದಿ ಗಾಂಧಾರಿ ?** |

**ಹನಿಗವನ** (ಬಹುಮಾನಿತರ ಹೆಸರು ಮಾತ್ರ)

| | |
|---|---|
| ಅಬ್ದುಲ್ ರಹೀಮ ಗೋವ್ಹಾಳ | ಅಂಬಾದಾಸ ವಡೆ |
| ಜೆ. ಕೆ. ಎಸ್ಸರ | ಕಮಲಾಮೂರ್ತಿ |
| ಕವಿಕಂದ, ಗದಗ ಗ್ರೀಷ್ಮ | ಬಿ. ನರಸಪ್ಪ |
| ಪ್ರಕಾಶ ಬೆಳಕೂಡ | ಎಸ್. ವಿ. ಪ್ರಭಾವತಿ |
| ಬಿ. ವಿ. ಜಿ. ಪ್ರಸಾದ್/ಬಿ.ಎ.ಪಾರ್ವತಿ | ಅಪ್ಪಣ್ಣಪ್ಪಯ್ಯ |
| ಪೂರ್ಣಿಮಾ ಲಾಗದಮನೆ | ಬಸವಪ್ರಭು ಪಾಟೀಲ |
| ಭೀಷ್ಮ, ತಡಸ | ಮಲ್ಲಿಕ್ ಟಿ. ಬಿ. |
| ಬಿ.ಎನ್.ಮಂಜುಳಾದೇವಿ | ಮ.ಶ್ರೀ.ಮುರಳಿಕೃಷ್ಣ |
| ಆರ್. ಸುಧಾ | ಪಂ.ರಾ.ಸುಧೀಂದ್ರ ಕುಮಾರ |
| ಸುಮ ಜಿ. ಭಟ್ | ಹಾ. ಉ. ಸೊರಬ |
| ಹೆಚ್. ಎನ್. ಸೋಮಶೇಖರ | ವಸಂತ ಮಲ್ಲಾಪುರ |
| ವಿಜಯಕಾಂತ ಪಾಟೀಲ | ವಿಜಯೇಂದ್ರ ಕುಲಕರ್ಣಿ |
| ವಿಶ್ವನಾಥ ಬದಿಕಾನ | ವೀಣಾ ಬನ್ನಂಜೆ |
| ಶಿವಕುಮಾರ ಕಲ್ಲೂರ | ಶಿವಪ್ರಸಾದ ಹಾದಿಮನಿ |
| | ಶ್ರೀನಿವಾಸ ಜಾಲವಾದಿ |

---



---

# ಹೆಣಾ

ಗೌರೀಕಂತ ಗಣೇಶ

ಬಡವರು ಸತ್ತರೆ ಸುಡಲಿಕೆ ಸೌದಿಲ್ಲೋ
ಒಡಲ ಕಿಚ್ಚಲಿ ಹೆಣ ಬೆಂದೊ ನಲುಗ್ಯಾವೋ
ಬಡವರಿಗೆ ಸಾವ ಕೊಡಬೇಡೊ ॥

ಇಳಿಹೊತ್ತಿನಲ್ಲಿ ಬೇವಿನ ಗಿಡದ ಕೆಳಗ ಕುಂತು ಮಂಗಳ ತಲೆ ಬಾಚುವ ನೆವದಾಗ ಸಂಗವ್ವ ಹೇನು ಹುಡುಕುತ್ತ ಸಿಗನ "ನಿನ್ನ ತಲ್ಯಾಗಿನ ಹೇನು ಸಾಯ್ಲಿ" ಬೈದು ಹೇನು ಒರೆದು ಮತ್ತೆ ಹೇನು ಹುಡುಕಲು ಮಂಗಳ ತಲೆಯಲ್ಲಿ ಕೈ ಬೆರಳ ತೂರಿಸುವಾಗ ಮನಿಯ ಒಳಗಿಂದ ಜೋರಾಗಿ ಅಳೂದ ಕೇಳಿ ತನ್ನ ಮುದಿ ಮಾವ ಸತ್ತದು ಗ್ಯಾರಂಟಿಯಾಗಿ ಹೇನು ಒರೆದ ಕೈಯಿಂದಲೇ ಹೊಯ್ಕೊಳ್ಳುತ್ತ ಮನಿಯೊಳಗ ಓಡಿದಳು.

ಶಂಕ್ರಜ್ಜ ಸತ್ತ ಸುದ್ದಿ ನೆರೆಯೋರಿಗೆಲ್ಲಾ ಗೊತ್ತಾಗಿ ಹೆಣ್ಣುಮಕ್ಕಳೆಲ್ಲಾ ಬಂದು ಸೆರಗಿನಲ್ಲಿ ಮುಸಿ ಮುಸಿ ಅಳುತ್ತ ಯಾರ್ಯಾರು ಎಷ್ಟೇಷ್ಟು ಅಳತಾರಂತ ಲೆಕ್ಕಾಚಾರ ಮಾಡುವಲ್ಲಿ ನಿರತರಾದರೆ ಮಕ್ಕಳೆಲ್ಲಾ ಅಡಗೀಮನಿಗೆ ಹೊಕ್ಕು ಪಂಚಮಿ ಹಬ್ಬಕ್ಕ ಮಾಡಿದ್ದ ಉಂಡಿ, ಕರದಂಟನ್ನು ಪತ್ತೆ ಹಚ್ಚಿ ಇನ್ನೇನು ತಿನಬೇಕಂತ ಬಾಯಿಗಿಟ್ಟುಕೊಳ್ಳಬೇಕೆನ್ನುದರಾಗ ಸಪ್ಪಳಕ ಸಂಗವ್ವಳ ಸೂಕ್ಷ್ಮ ಕಿವಿಗೆ ಕೇಳಿ ಅವಸರಿಸಿ ಬಂದರೆ ತನ್ನ ಒಬ್ಬನೇ ಮಗ ಉಂಡಿ ತಿನ್ನುತ್ತಿದ್ದರ ಉಳಿದವರ ಮಕ್ಕಳೆಲ್ಲ ಕೂಡಿ ತಿನ್ನೂದ ಕಂಡ "ಸತ್ತ ಮನ್ಯಾಗ ಉಂಡಿ ತಿಂತಿರಲ್ಲೋ ನಿಮ್ಮ ಹೆಣಾ ಎತ್ಲಿ" ದೊಡ್ಡ ಧ್ವನಿ ತಗದ ಅಳೋದ ಕಂಡ ಹೊರಗಿದ್ದೋರು ಒಳಬಂದು ಲೊಚಗುಟ್ಟಿ ಹುಡುಗರನ್ನು ಬೈದು ಕಳಿಸುವಾಗ ತನ್ನ ಮಗನನ್ನು ಎಳಕೊಂಡು "ನಿಮ್ಮ ಮುತ್ತ್ಯಾ, ಓದನಲ್ಲೋಽ..." ಅಳುತ್ತ ಹರಿದ ಕಿಸೆಯಲ್ಲಿ ಉಂಡಿ ತುರುಕಿ ಹೊರದಬ್ಬಿದಳು.

ಸುದ್ದಿ ತಿಳಿಯಣ ಚಾದಂಗಡಿ ಮುಂದ ಬೀಡಿ ಸೇದತಿದ್ದ ಈರಪಣ್ಣ ಗಟ್ಟಿಯಾಗಿ ಅಳಲು ಇನ್ನೊಂದ ಕಪ್ಪ ಚಾ ಕುಡದು "ಹ್ವಾದೆಲ್ಲೋ ಏ ಯಪ್ಪಾ" ರಾಗ ತಗದ ಓಡೋಡಿ ಬಂದ. ಹೊಸಾದ ಬಂದ ಸಿನೇಮಾಕ್ಕ ಹೋಗಾಕ ರೆಡಿಯಾಗಿ ಇನ್ನೇನು ತೀಕಿಟು ತಗಸಬೇಕೆನ್ನುದರಾಗ ಸುದ್ದಿ ತಿಳದ ಬಸಣ್ಣ ಅಳುತಾ ಬಂದ.

ಮೂಲಿಮನಿ ಶಂಕ್ರಜ್ಜ ಸತ್ತನಂತ ಹಿರೇರೊಳಗ ಮುಖಂಡನಾದ ಶಿವಪ್ಪಗ ಗೊತ್ತಾಗುಕ ತಡಾಗಲಿಲ್ಲ. ಸುದ್ದಿ ತಿಳಿಯುನ ಕೂಡೂ ಕಾಣದಂಗ ಆವನ ಮುಖದಾಗ ನಗಿ ಮಿಂಚಿ ಮಾಯಾತು. ಉಡದಾರಕ್ಕ ಸಿಗಿಸಿಕೊಂಡಿದ್ದ ಕೀಲಿಗೊಂಚಲನ್ನ ಒಮ್ಮೆ ಸವರಿ ಪೌಡಾ (ಟಾವೆಲ್ಲು) ಹೆಗಲಿಗೆ ಹಾಕ್ಕೊಂಡು ಹೊಂಟ ಬಂದ. ಶಿವಪ್ಪ ಬರೂದನ ದೂರದಿಂದ ನೋಡಿದ ಈರಪಣ್ಣ ಮತ್ತಷ್ಟ ಜೋರಾಗಿ ಅಳಾಕತ್ತಿದ. ಶಿವಪ್ಪ ಸೀದಾ ಮನಿ ಒಳಗೋಗಿ ನೋಡಿದ. ಎಂದೋ ಸಾಯುಬೇಕಿದ್ದ ಶಂಕ್ರಜ್ಜ ಇವತ್ತ ಸತ್ತಾದ ಕಂಡು ಸೊಲುಂಪ ಕೆಟ್ಟನಿಕಿ ಅತ್ತಾಗಿತ್ತಾಗ ನೋಡಿದ. ಎಲ್ಲಾರೂ ಅಳೂದ ಕಂಡ "ಯಾಕ ಅಳತಿರೆವಾ, ಅವಂದ ಅಸ್ಟಿತ್ತು, ಆತು..." ಕಂಪ್ನಿ ನಾಟ್ಕದ ದುಃಖದ ಪಾರ್ಟ ಮಾಡುವವನ ಡೈಲಾಗು ಹೊಡೆದ. ಅಪ್ಪಕ್ಕ ಸಂಗವ್ವ ಎದೆ ಬಡಿ ಬಡಿದುಕೊಂಡು ಅಳುವಾಗ ಸೆರಗ ಸೊಲುಪ ಜಾರಿ ಅವಳೆದೆಯ ಉಬ್ಬಿದ ಮೊಲೆಯನ್ನು ಶಿವಪ್ಪ ಮಾರೆಗಣ್ಣಲಿ ದಿಟ್ಟಿಸಿದಾಗ ಅವನೆದೆ ತಳಮಾರನ ಹಲಗೆಯಾತು. ಹೊರಗ ಚಾಯುಪ್ಪ ಬಂದದನ್ನು ಗಿಡ್ಡಬಸ್ಯಾ "ಹಿರೇರಾ, ಚಾಯಪ್ಪ ಮಾವ ಬಂದಾನ್ರಿ" ಒದರಿದಾಗ ಇನ್ನೊಮ್ಮೆ ಹಣಿಕಿಕ್ಕಿ ಶಿವಪ್ಪ ಹೊರನಡೆದ

ಚಾಯುಪ್ಪ ಮತ್ತ ಶಿವಪ್ಪ ನಾಲ್ಕಾರ ಹಿರೇರ ಕೂಡ ಕೂಡಿ ಈರಪಣ್ಣ ಆಮ್ಯಾಲ ಬಸಣ್ಣನ್ನ ಕರದ್ರು. ಸೀಜನ್ ಇಲ್ಲದಕ ಸೀರಿ ಮಗ್ಗ ಬಂದಾಗೂ ಕಾಲದಾಗ ತನ್ನಪ್ಪನ್ನ ಡಾಕಟರಿಗೆ ತೋರಿಸಿದ್ರ ಈಗ ಮಣ್ಣಿಗೆ ನಯಾ ಪೈಸಾನೂ ಇಲ್ಲಂತ ಹೇಳಿ ಕಣ್ಣೀರಿಟ್ಟರು. ಅದನ್ನ ಕಾಯುತ್ತಿದ್ದ ಶಿವಪ್ಪ "ಚಿಂತಿ ಮಾಡಬ್ಯಾಡ್ರಿ, ಕೆಲ್ಸಾ ಸಾಗಸೂನು. ಯಾರಾರ್ನ ಕರಸೂದದ ಕರ್ಯಾಕ ಕಳಸೂನು" ತಲಿಯಾಡಿಸಿದ ಇಬ್ರು ಸಂಬಂಧಿಕರ ಊರನ್ನೆಲ್ಲಾ ನೆಪ್ಪಿಸಿಕೊಂಡು ಹೇಳಿದ್ರು. ಸಮೀಪಯಿದ್ದ ಊರುಗೋಳಿಗೆಲ್ಲಾ ಕಳಿಸಿದ ಮ್ಯಾಲ ನಾಲತವಾಡದಾಗ ಇರೂ ಮಗಳಿಗೆ ತಿಳಿಸಾಕ ಯಾರೂ ಸಿಗಲಿಲ್ಲ. ಅತ್ತಾಗಿತ್ತಾಗ ನೋಡುದರಾಗ ಕುಡುಕ ನಿಂಗಪ್ಪ ಬಂದು "ನಾ ನಾಲತ್ತವಾಡ ನೋಡಿನಿ, ಸುದ್ದಿ ತಿಳಿಸಿ ಬರ್ತೀ"ನಂದ ರೊಕ್ಕಾ ಕೊಡಾಕ ಹಿಂದಮುಂದ ನೋಡಿದ ಶಿವಪ್ಪಾಗ "ಇಲ್ರಿ ಸೀದಾ ಹೋಗಿ ಕರ್ಕೊಂಡು ಬರ್ತೀನಿ ನೋಡೇರ ನೋಡ್ರಿ" ಗಾಡಿ ಚಾರ್ಜಿಗೆ ಕೊಟ್ಟ ಕಳಿಸಿದರು.

ಮಂದಿ ಹೆಚ್ಚಾದಂಗೆಲ್ಲಾ ಹೆಣಾ ತೊಳದ ಕುಂದ್ರಸಬೇಕಂತ ಹಿರೇರ ಹೇಳಿದ್ದಕ್ಕ ಶಂಕ್ರಜ್ಜನ ಮೈತೊಳದ ಜಾತ್ರಿಗಿ ಹೊಲಿಸಿದ್ದ ಅಂಗೀನ ಟ್ರಂಕ್‌ನಿಂದ ತಗದ ಹಾಕಿ,

ತಲಿಮ್ಯಾಲ ರೇಸ್ಮಿ ರುಂಬಾಲು ಸುತ್ತಿ ಉತ್ತರದ ದಿಕ್ಕಿಗೆ ಮುಖಾ ಮಾಡಿ ಕುಂದ್ರಿಸಿ ಮಗ್ಗಲ ದೀಪಾ ಹಚ್ಚಿಟ್ಟರು, ಎಡಕ, ಬಲಕ ಕುಂತು ಅಳಾಕ ಮಂದೀಗೆ ಚೊಲೋ ಆತು. ಹೊರಗ ಬಾಡಿಗಿ ಗ್ಯಾಸು ತರಿಸಿದ್ರು. ಐವತ್ತೆರಡ ಎಲಿ ಮಂದಿ ಆಗಲೆ ಜಮಾ ಆಗಿ ಲಚುಮವ್ವನ ಗುಡಿ ಕಟ್ಟಿಗಿ ಆಡಾಕ ಕುಂತ್ರು. 'ಸಿದ್ಧಾರೂಢ ಮಠಕ್ಕ ಭಜನಿ ಹೇಳೂಣಂತ ಇರಪಣ್ಣ ಬ್ಯಾಡಂತ ಬಸಣ್ಣ. ಆದ್ರ ಕೂಡಿದ ಮಂದಿ "ಸಾದು ಮನಶಾ ಶಂಕ್ರಪ್ಪ. ಮಠಕ್ಕ ಹೊಕ್ಕಿದ್ದ. ಭಜನಿ ತರಸ್ರಿ" ಬಸಣ್ಣ ತಣ್ಣಗಾದ. ಮಣ್ಣ ಮಾಡಿದ ಮ್ಯಾಲ ಭಜನಾ ಮಂದೀಗೆ ಕೊಡಾಕ ರೊಕ್ಕಾ ಎಲ್ಲಿಂದ ತರ್ಲೆಂತ ತಲಿ ಮ್ಯಾಲ ಕೈ ಹೊತ್ತ ಕುಂತ.

"ದುಡದದ್ದ ಸಾಲವಲ್ದು, ಚಮಕಾ ಧಾರಣಿ ಹೆಚ್ಚಾಗ್ಯದ, ಸೀರಿ ಧಾರಣಿ ಕಡಿಮಿ ಆಗಿ ಮಗ್ಗ ಬಂದಾಗೂದಾಗ್ರ ಅದಾವು. ಧಣೇರು ಸಾಲ ಕೊಡವಲ್ರು. ಇಂಥದಾಗ್ರ ಅಪ್ಪ ಸತ್ತು ಪಜೀತಿ ಬಂತಲ್ಲ..." ಹಿಂಗ ಬಸಣ್ಣ ಚಿಂತಿ ಮಾಡಿ ತಿಳಿಲಾರದಕ ಮುಖಾ ಮುಚಕೊಂಡು ಕುಂತ. ಇದನ್ನ ಕಂಡ ಶಿವಪ್ಪ "ಬಾಯಿಲ್ಲೆ, ಚಿಂತಿ ಮಾಡಿದ್ರ ಮತ್ತ ಬರ್ತಾನನು ನಿಮ್ಮಪ್ಪ, ಬಾ...ಬಾ...." ಅರಮನಿ ಸಂಗಪ್ಪನ ಚಾದಂಗಡಿಗೆ ಕರಕೊಂಡು ಹೋಗಿ ಮಿರ್ಚಿ ಹೇಳಿದ. ಬ್ಯಾಡಂತ ಬಸಣ್ಣ. "ಇವತ್ತ ರಾತ್ರಿ ಊಟಿಲ್ಲ, ತಗೋತಿಸ್ನಂತ" ಜೋರು ಮಾಡಿದ ಮ್ಯಾಲ ಬಸಣ್ಣ ಮಿರ್ಚಿ ಬಾಯಾಗಿಟ್ಟುಕೊಂಡಾಗ ತನ್ನಪ್ಪ ನೆನಪಾಗಿ ಬಾಯಾಗಿದ್ದುದು ಹೇಸಿಗೆ ಅನಿಸಿ, ಉಗುಳಿದ. ಅಜಮಾನ ಹಾಕಿದ ಮಿರ್ಚಿ ಶಿವಪ್ಪಗ ಮತ್ತಷ್ಟ ರುಚಿ ಅನಿಸಿ ಎಲ್ಲಾನೂ ತಿಂದ. "ಮುಂಜಾನಿಂದ ಉದ್ರಿ ಹಚ್ಚು. ಈಗಿಂದಷ್ಟು ತಗಾ" ಶಿವಪ್ಪ ರೂಪಾಯಿ ಮ್ಯಾಲ ಪಾವಲಿ ಕೊಟ್ಟು ಬಸಣ್ಣನ ಕೂಡ ಹೊರ ಬಂದ. ರಾತ್ರಿ ಭಜನಾದೋರಿಗೆ, ಇಸ್ಪೀಟಾಡೋರಿಗೆ ಮತ್ತ ಹೆಣಾ ಕಾಯೋರಿಗೆ ಹಿಂಗೆಲ್ಲಾ ಮಂದೀಗೂ ಬೇಕಾಗುತ್ತಂತ ತುಂಗಳ ಮಲ್ಲಪ್ಪನ ಅಂಗಡ್ಯಾಗ ಚೀಲ ಚುರಮಾರಿ ಮ್ಯಾಲ ವಗ್ಗರಣಿಗೆ ಬೇಕಾಗೂ ಸಾಮಾನು ಕೊಡಿಸಿ ಯಲ್ಲನ ಕೂಡ ಹೊರಿಸಿ ಕಳಿಸಿದಾಗ ಬಸಣ್ಣ ಪಿಳಿ ಪಿಳಿ ಕಣ್ಣ ಬಿಡೂದ ಕಂಡ ಶಿವಪ್ಪ "ರೊಕ್ಕಾ ನಾ ಕೊಡ್ತೀನಿ, ಕೊಡಾಕಂತಿ" ಹೇಳಿದಾಗ ಅದು ವರೆಗೆ ಉಸಿರು ತಡಿ ಹಿಡಿದಿದ್ದನ್ನ ಒಮ್ಮೆಗೆ ಬಿಟ್ಟ. "ಒಂದೀಟ ತಡದ ಬರ್ತೀನಿ" ಶಿವಪ್ಪ ಹೇಳಿ ಹೋದಾಗ ಬಸಣ್ಣಗ ತಾವೊಬ್ಬನ ಅನಿಸಿ ಮೈಯೊಳಗ ನಡುಕ ಬಂತು. "ಎರಡ ರೊಟ್ಟಿ ಉಂಡ್ರ ಹೆಚ್ಚು ಒಂದs ರೊಟ್ಟಿ ಉಂಡ್ರ ಕಮ್ಮಿ" ಆಗೂ ಕಾಲದಾಗ ತಮ್ಮಪ್ಪ ಸಾಯುಬಾರದ ಸತ್ತನಲ್ಲ ಅನಿಸಿ ತಲೀನ ಪರಪರ ಕೆರಕೊಂಡ.

ಎರಡು

ಊರು ಮಲಕ್ಕೊಂಡಿತ್ತು. ನಾಯಿಗೊಳೊ ಊಳಿಡಾಕತ್ತಿದ್ದವು. ಮಣ್ಣ ಕೊಡಾಕ ಬಂದವ್ರು ಬೀಡಿ ಸೇದೂದು, ಇಸ್ಪೀಟಾಡಿ ಸೋತು ಮತ್ತ ರೊಕ್ಕಕ್ಕ ಓಡ್ಯಾಡೋರು, "ಅಗ್ಗ ಮಗ್ಗವ ನುಂಗಿ, ಮಗ್ಗವ ಲಾಳಿ ನುಂಗಿ" ಒಡಕು ಕಂಠದಿಂದ ಸೇಕರಪ್ಪ

ಉಳಿವೋರು ಸೋ ಅನ್ನೂದು ಸಾಕಾಗಿ ಇಸ್ಪೀಟಾಡಬೇಕಂತ ಪಾಳೀದ ಮ್ಯಾಲ
ಒಬ್ಬೊಬ್ರು ಬರೋದು. ಮಕ್ಕಳೆಲ್ಲಾ ಬ್ಯಾರೆಯವ್ರ ಮನ್ಯಾಗ ಉಂಡು ಮಲ
ಕ್ಕೊಂಡಿದ್ರು ಸಂಗವ್ವ, ಬಸಣ್ಣ, ಇರಪಣ್ಣ, ಶಾಂತವ್ವ ಅಲ್ಲಲ್ಲೇ ಕುಂತು ಹೆಣದ
ಮುಂದ ಬರೋ ನೊಣಾನ ಜಾಡುತಿದ್ರು. ಶಿವಪ್ಪ ತನ್ನ ಕಾಲಿಗತ್ತಿದ್ದ ಇಸಬನ್ನ
ತುರಿಸಿ ತುರಿಸಿ ಸಾಕಾಗಿ ಮನಿಗ್ಹೋಗಾಕ ಏಳಬೇಕನ್ನೂದರಾಗ ಗುಳೇದಗುಡ್ಡ
ದಿಂದ ಮಂದಿ ಬಂದ್ರು. ಮನಿಯಾಗಿನ ಮಂದಿ ಜೋರಾಗಿ ಅಳಾಕ ಸುರು
ಮಾಡಿದ್ರು. ಹೆಣ್ಮಕ್ಕಳೆಲ್ಲಾ ಅಳತ್ತಿದ್ರು ಗಂಡಸರೆಲ್ಲಾ ಚಾ ಚುರಮರಿಗೆ ಕೈ
ಹಾಕಿದ್ರು. ಶಿವಪ್ಪಗ ಆಕಳಿಕಿ ಬರಾಕತ್ತಿ "ಹೆಣಾ ಕಾಯೋದು, ಹೆಣ್ಣ ಕಾಯೂದು
ಒಂದ" ಅನಿಸಿದ್ರೂ "ಹೆಣ್ಣ ಕಾಯೂದ್ರಾಗಿನ ಮಜಾ ಹೆಣಾ ಕಾಯೋದ್ರಾಗೇನೈತಿ
ಮಣ್ಣಂತ" ಕಚ್ಚಿ ಸಿಗಿಸಿಕೊಂಡ ಹೊಂಟ. ಇರಪಣ್ಣ ನೋಡಿ "ಹಿರೇರ ಹೋಗ
ಬ್ಯಾಡ್ರಿ, ಇಲ್ಲೇ ಇರ್ರಿ" ದೈನಾಸೀಲೆ ಬೇಡುವಾಗ "ದೌಡ ಏಳ್ತನ ಬರ್ತಿನಾಳ"
ಹೊಂಟ. ಬೆಳತನಕ ಚಾ, ಚುರಮರಿ ಸುಗ್ಗಿ ನಡುವ ಐದರ ಹೊತ್ತಿಗೆ ಮಂದಿ
ಎರಡಾಕ ಹೊಂಟ್ರು.

ಬಸಣ್ಣಗ ಎಚ್ಚರಾತು. ಕಟ್ಟಕಡೆಯ ಎರಡ ವರ್ಸದ ತನ್ನ ಮಗಾ ಅಳೂದಕ ಎದ್ದ
ಕುಂತ. ಮಗಾ ಹೇತಿದ್ದ. ಆ ಹೇಲಲ್ಲಿಯೋ ಕೈಯೆದ್ದಿ ಬಾಯಿಗಿಟ್ಟುಕೊಂಡು
ಅಳುತಿತ್ತು. ಯಾರಿಗಾರ ಹೇಳಬೇಕನಿಸಿದ್ರೂ ಹೇಳೂದಾಗಲಿಲ್ಲ. ಅವನ ಕಣ್ಣು
ಮಗನ ಮುಕಾಳಿಯ ಬಳಿ ಸುಳಿಯಿತು. ತೊಡಿಗೆ, ಕಾಲಿಗೆ, ಕೈಗಂಟಿದ್ದ ಹೇಲನ್ನು
ನೋಡಿ ತನ್ನಪ್ಪ ನೆನಪಾದ. ಸಾಯುವ ಮುನ್ನ ಏಳಲು ನಿಸಕ್ತನಾಗಿ ಕುಂತಲೇ
ಒಂದಾಕ, ಎರಡಾಕ ಮಾಡುವಾಗ ಸಣ್ಣವರೆಲ್ಲ ಮುಖಾ ಸಿಂಡರಿಸಿಕೊಂಡ್ರು
ಶಂಕ್ರಜ್ಜ ನರಳಿ "ಸಿವ...ಸಿವಾ... ಹಾಲಗೇರಿ ಮೇಲಗಿರಿ ಮಲ್ಲಯ್ಯಾ, ದೌಡ
ಕರಕೊಳ್ಳಪಾ" ಬೇಡಿಕೊಳ್ಳುವಾಗ ತಾನ ನೆರವಾಗತಿದ್ದ, ಸೊಲುಪ ಹೊತ್ತು ಅವನ
ಬುರುಡೆಯಲ್ಲಿನ ಮಿದುಳು ಹುಟ್ಟು ಸಾವಿನ ಬಗ್ಗೆ, "ಸಣ್ಣೋರಿಗೂ, ಮುದುಕ್ರಿಗೂ
ವ್ಯತ್ಯಾಸ ಯಿಲ್ಲಲ" ಅನಿಸಿತು.

ಹೊತ್ತೇರಿದಂಗ ಮಂದಿ ಕೂಡಾಕ ಹತ್ತಿ ಅರಮನಿ ಸಂಗಪ್ಪನ ಚಾದಂಗಡಿ ಬಿಲ್ಲು
ಏರಾಕ ಹತ್ತಿತು. ಕೆಲವು ಊರಾಗ ಹಿಂಗದ ಪದ್ಧತಿ. ಸತ್ತ ಮನ್ಯಾಗಿನೋರಿಗೆಲ್ಲಾ
ಬಂದ ಮಂದಿನ ಚಾ ಕುಡಿಸೂದು. ಆದ್ರ ಈ ಊರಾಗಿನ ಪದ್ಧತೀನ ಬ್ಯಾರೆ.
ಯಾರ ಮನ್ಯಾಗ ಸತ್ತಿರ್ತಾರ ಅವರ ಹೆಸರೀಲೆ ಚಾದಂಗಡ್ಯಾಗ ತಮಗ ಬೇಕಾದ್ದ
ತಿಂದ ಬರೂದು. ಹಿಂಗಾಗಿ ಮಣ್ಣಿನ ಖರ್ಚಕ್ಕಿಂತ್ಲೂ ಚಾದಂಗಡಿ ಉದ್ರಿ ಹೆಚ್ಚಾಗಿ
ಹೊಲಾ ಒತ್ತಿ ಹಾಕ್ಯಾರ, ಬಂಗಾರ ಮಾರಿದೋರು ಅದಾರ. "ಆದ್ರ ನಾಯೇನ
ಮಾಡ್ಲಿ? ಹೊಲಾಯಿಲ್ಲ. ಬಂಗಾರಿಲ್ಲ. ಇದ್ದ ಎರಡು ಮಗ್ಗಾನೂ ಬಂದಾಗೂದ್ರಾಗ
ಆದಾವು" ಬಸಣ್ಣನ ಕಣ್ಣು ಮಳಿಗಾಲದ ಕೆರಿಯಾತು.

ತಮ್ಮ ಮಂದಿ ಈಗಾಳೆ ಊರು ಬಿಟ್ಟು ತಿಂಗಳಾತು. ಆರಬಳ್ಳ ಗವಿಯಪ್ಪ ಸೊಸೈಟಿಯಿಂದ ತಂದ ಬಂಡಲನ್ನೆಲ್ಲಾ ಮಾರಿ ರಾತ್ರೋರಾತ್ರಿ ಹೆಂಡ್ರು, ಮಕ್ಳ ಕೂಡ ಊರ ಬಿಟ್ಟಾನ. ಗೋವಾ. ಕಾರವಾರ, ಮುಂಬೈ ಕಡೆ ಗುಳೆ ಹೊಂಟ ಮಂದಿಗೆ ಲೆಕ್ಕಿಲ್ಲ. ಪ್ರತಿ ಸಲ ಒಕ್ಕಲಿಗೇರ ಮಂದಿ ಗುಳೆ ಹೋದ್ರ ಈ ಸಲ ನೇಕಾರರು ಗುಳೇ ಹೋಗೂ ಕಾಲ ಬಂದು ಆಳಿಗಾಲ ಬಂತಲ್ಲ. ದುಡಿಯೋ ಕೈ ಕಮ್ಮಿಯಾದ್ರು ಉಣ್ಣೋ ಕೈಗೇನೂ ಕಮ್ಮಿಯಿಲ್ಲ. ಸಾಮಾನೆಲ್ಲಾ ತುಟ್ಟಿಯಾಗಿ ಮನಶ್ಯಾ ಮಾತ್ರ ಅಗ್ಗ ಆಗ್ಯಾನ. ಹಿಂಗಿದ್ದಾಗ ತಮ್ಮ ಸಂಸಾರನೂ ಎತ್ತ್ಯಾಗರ ಒಯ್ಯಬೇಕೆನಿಸಿದ್ರೂ ಸಾಯೋ ಅಪ್ಪನ್ನ ಬಿಟ್ಟು ಹೋಗಬಾರಂತ ತಡದ. ಮಂದಿ ಕೈಯ್ಯಾಗ ರೊಕ್ಕಿಲ್ಲ. ಸಾಲಾ ಕೊಡೋರಿಲ್ಲ. ರಂಡಿ ಮುಂಡಿ ರಾಜ್ಯದಾಗ ತಿಂದ ವನ ಜಾಣಂತ ಚಾದಂಗಡಿಗೆ ಮಂದಿ ಹೊಕ್ಕು ಸಿರಾ, ಉಪ್ಪಿಟ್ಟು, ಪುರಿ, ಉಂಡಿ, ಜಿಲೇಬಿ, ಕರದಂಟು ಹಿಂಗೆಲ್ಲಾ ತಿಂದ ತೇಗಿದ್ರು. ಇದನ್ನ ಕಂಡ ಬಸಣ್ಣ ಕಲ್ಲಾಗಿ ಕುಂತ್ರು ಇರಪಣ್ಣ ಮಕ್ಳ ಕರ್‍ಕೊಂಡೋಗಿ ಬೇಡಿದ್ದ ಕೊಡಿಸಿದ.

ಕುಣಿ ತೊಡಾಕ ಕರಿಸಿದ ಮಂದಿಗೆ ಚಾ, ಸೆರೇಕ ರೊಕ್ಕಾ. ಸನಾದಿಯೋರಿಗೂ ಚಾ, ಸೆರೇಕ ರೊಕ್ಕಾ; ತಳವಾರಗ ರೊಕ್ಕಾ ಕೊಟ್ಟ ಶಿವಪ್ಪ ನಾಳಿ ಹೆಂಗ ಡಬಲ್ ಹೇಳಬೇಕಂತ ಗುಣಾಕಾರ ಮಾಡುತ್ತಿದ್ದ. ಚಟ್ಟ ಕಟ್ಟಾಕ ಪರಪರಿ ಹಾಳಿ ಬಿದಿರು ಬೇಕಂತ ಬಡ್ಡೂಳಿ ಮಲ್ಲಪ್ಪ ಅಂದಾಗ ಇರಪಣ್ಣ "ಅಲ್ಲೇ ಶಿವಪ್ಪನೋರ ಕಡಿಯಿಂದ ರೊಕ್ಕಾ ಇಸಗೊಂಡು ತಗೊಂಬಾ" ಹೇಳಿದಾಗ ಬಸಣ್ಣ ಬ್ಯಾಡಂದ. ಸಾಯುತನಕ ಚಂದಂಗಿರದ ತನ್ನಪ್ಪಗ ಸತ್ತ ಮ್ಯಾಲ್ಯಾಕ ಸಿಂಗಾರಂತ ? ವರ್ಷಕ ಎರಡ ಧೋತ್ರ ಕೊಡಿಸ್ತೀವಂದ್ರೂ "ಬ್ಯಾಡಪಾ, ಮುದುಕಗ ಯಾಕ ಧೋತ್ರಾ ?" ಹರಿದ ಧೋತ್ರಗಳನ್ನ ಗಂಟಾಕಿ ಉಡುತ್ತಿದ್ದ.

ಸೂರ್ಯಾ ನೆತ್ತಿಮ್ಯಾಲ ಬರೂದರಾಗ ಆಜುಬಾಜು ಊರಾಗಿನ ಮಂದಿ ಬಂತು; ಆದ್ರ ನಾಲತವಾಡಕ ಹೋದ ನಿಂಗಪ್ಪ ಬಂದಿರಲಿಲ್ಲ, ಕಾಯೋಣಂತ ಶಿವಪ್ಪ. ಹೆಚ್ಚ ಹೊತ್ತಾದ್ರ ಚಾದಂಗಡಿ ಉದ್ರಿ ಹೆಚ್ಚಾಗುತ್ತಂತ ಬಸಣ್ಣ ಅವಸರಾ ಮಾಡಿದ್ರ ಮಂದಿ "ಬಾಳ ಜೀವದ ಮಗಳ ಅಕಿ ಬರ್‍ಲಿ, ಬಂದ ಮ್ಯಾಲ ಹೆಣಾ ಎತ್ತೂದು" ಅಂದಾಗ ಬಸಣ್ಣ ತಣ್ಣಗಾದ. ನೇಗಿ ಸಾಮಾನೆಲ್ಲಾ ಮಾರಿದ್ರೂ ಈಗಾದ ಸಾಲ ಮುಟ್ಟೂದಿ ಲ್ಲಂತ ಹೇಳಬೇಕನಿಸಿದ್ರೂ ಹೇಳೂದಾಗಲಿಲ್ಲ. ಅಳಬೇಕಂತ ಕುಂತ. ಆಗಲಿಲ್ಲ, ಅವನ ಕಣ್ಣು ಬತ್ತಿದ ಕೆರಿಯಾಗಿತ್ತು.

ತಿರುಗಿ ನೋಡಿದ ಬಸಣ್ಣ. ತನ್ನಪ್ಪ ಸತ್ತಿಲ್ಲ. ಸುಮ್ನ ಕುಂತಾನ ಅನಿಸಿ "ಸಾಯೋ ಕಾಲಕ್ಕ ಸುಖಾ ಇದ್ದಿಲ್ಲ ಈಗ ಚಂದಂಗ ಮಣ್ಣ ಮಾಡಬೇಕಂದ್ರೂ ಆಗವಲ್ದು."

ತನ್ನಪ್ಪ ಧೋತ್ರ ನೇಯುವಾಗ ಸಜ್ಜಿ ಬರ ಬಂದು ಈ ಊರಿಗೆ ಬಂದಾಗ ತನಗ ಎಂಟಿತ್ತು ವರ್ಷ. ಮುಂದ ಧೋತ್ರದ ಮಗ್ಗ ನಿಂತು, ಸೀರಿ ನೇಯಾಕ ಸುರು ಮಾಡಿದಾಗ ನೇಕಾರೊಳಗ ನಂಬರ್ ಒಂದ್ ನೇಕಾರಾಗಿ ನವಿಲ ದಡಿ, ಚಿಕ್ಕಿ ಪರಾಸು, ಫುಟಾಣಿ, ನೌವಾರಿ. ರೇಸ್ಮಿ ಸೆರಗಿದ್ದ ಸೀರಿ ಹಿಂಗ ಎಂಥಾ ಸೀರೀನೂ ನೇಯೂ ತಾಕತ್ತಿತ್ತು ಅವಗ. ಎಳಿಹೊಕ್ಕ ಇರದ ಚಂದಂಗ ಸೀರಿ ನೇದು ಮ್ಯಾಲ ಗೊಂಡೆ ಕಟ್ಟಿಕೊಟ್ರ ಉಟುಕೊಳ್ಳುವಾಕಿ, ಚೆಲುವಿಯಾದ್ರು. ವರಾ ಬಂದಾಗ ತನ್ನಪ್ಪ ನೇದ ಸೀರಿ ಉಟಕೊಂಡ್ರ ಲಗ್ನಾ ಆಗತ್ತಂತ ಅನ್ನುವಂಗ ನೇದಾಂವ.

ಆ ರೇಸ್ಮಿ ಸೀರಿ ನೇದನಲ್ಲ. ಎಂಥಾದು ಅಂತೀನಿ. ಬಸಣ್ಣಗ ತಿಳುವಳಿಕಿಯಿದ್ದಿಲ್ಲ. ಮ್ಯಾಲ ಬ್ಯಾರೆ ಪದರು. ಹೊಳಸಿದ್ರ ಬ್ಯಾರೆ, ಸೆರಗು ಬ್ಯಾರೆ, ದಡಿ ಬಾರೆ, ಮ್ಯಾಲಿನ ಪದರ ಒಂದ ಕಲರ್ ಆದ್ರ ಒಳಗಿಂದ ಕಲರ್ ಬ್ಯಾರೆ, ಕಾಲ್ಪಡಿ ಹತ್ರ ಕನ್ನಡಿ ಇಟ್ಟು ಕೊಂಡು ರಾತ್ರಿ ಮಾತ್ರ ನೇಯುವಾಗ ಯಾರರ ಬಂದ ಎದ್ದ ಬಂದಾವ. ಅಂಥಾ ಸೀರಿ ಯಾರೂ ನೇದಿಲ್ಲ. ಆದ್ರ ಧಣೇರ ಮಾತಂದ್ರ ಹಸಿ ಗ್ವಾಡಿ ಮ್ಯಾಲ ಹಳ್ಳಿಟ್ಟಂಗ. ಸೀರಿ ಒಯ್ದು ಕೊಟ್ರ ತಿರುಗಿ ಬರಲಿಲ್ಲ. ಬ್ಯಾರೆ ಬ್ಯಾರೆ ಕಡಿ ಪರದರ್ಸನ ಮಾಡ್ಸಿ ಅದರ ಲಾಭೆಲ್ಲಾ ಧಣೀನ ತಿಂದ, ನೇದು ನೇದು ಅವಸಪ್ಪನ ನರಯೆಲ್ಲಾ ಎದ್ದು ಕಾಣುವಂಗಾಗಿ ಸೀರಿ ಎಳಿಗೆ ಶಂಕ್ರಜ್ಜನ ನರಕ್ಕ ಏನೂ ವ್ಯತ್ಯಾಸಯಿದ್ದಿಲ್ಲ, ಹೊಟ್ಟಿ ಒಳಗೋಗಿ. ಎದಿ ಮುಂದ ಬಂದು ಕೋಲಿನಂಗಾದ್ರೂ "ಬ್ಯಾಡಪಾ ನಾವು ದುಡದಾಕ್ತೀವಿ" ಮಕ್ಳ ಎಸ್ಟಂದ್ರೂ ಬಡವ ಚವಕಾ ತರೂದು, ತೋಡೋದು, ಸುತ್ತೂದು ಮಗ್ಗ ಖಾಲಿಯಿರನ ವಾಚಾ ಒಗದು ಸರಿಯಿರಲಿಲ್ಲಂದ್ರ ನೋಡಿ ಎಲ್ಲೇರ ಎಳಿ ಹೊಕ್ಕಿತ್ತಂದ್ರ ಕರದು "ಎಳಿಗಿಂತ್ಲೂ ಎಳಿಯಾದಾಗ ಸೀರಿ ಅಕ್ಯಾದ" ಹೇಳಿ ಏನರ ಕಸ್ಟ ಭಂದ್ರ ಸುಧಾರಿಸಿ ಹೇಳುವನ ಹೋದ್ರ, ಹಿರೇರಿಲ್ಲದನ ಮನಿ ಹೆಂಗ ಸಾಗೀತು"...

## ಮೂರು

ಬಸಣ್ಣ ತಟ್ಟನ ಹೊಳ್ಳಿ ನೋಡಿದ. ಇಸ್ಪೀಟಾಡೋ ಮಂದಿಯೊಳಗಿಂದ ಅಳೂದ ಕೇಳಿ ಅಳೋರ್ಯಾರಂತ ಎದ್ದು ನಿಂತ. ಮೈಬೂಸಾಬ ಅಳತ್ತಿದ್ದ. "ನಮ್ಮಪ್ಪ ಸತ್ರ ಇವಸಿಗೇನಾತು"? ಬಸಣ್ಣ ಮೈಬೂನ ಕಡೆ ಬಂದ. "ಹೆಂಗ ಮಾಡ್ಲೋ ಬಸ್ಯಾ, ಮಗಳ ಶಾದಿ ಮಾಡಾಕಂತ ಸಾಲ ತಂದಿದ್ದ ರೊಕ್ಕಾನ ನಿಮ್ಮಪ್ಪನ ಹೆಣಕ್ಕ ಇಟ್ಟ ನೆಲ್ಲೋ ಏ ಅಲ್ಲಾ" ಮೈಬೂಸಾಬನ ಅಳೂದಕ ಬಸಣ್ಣ ತಲಿ ತುರಿಸಿಕೊಂಡ. ಮಗ್ಗ ಲಿದ್ದ ಪರಪ್ಪ ಕಿದಕಿದ, "ಸುಮ್ನರಲೇ ಮೈಬ್ಯಾ, ಮಗ್ಳ ಶಾದಿಗೆ ಸಾಲಾ ತಂದ್ರ ಇಲ್ಲ್ಯಾಕಪಾ ತರಬೇಕು, ಸೋತು ಮ್ಯಾಲ ಶಂಕ್ರಜ್ಜನ ಮ್ಯಾಲ್ಯಾಕ ಹಾಕಬೇಕು ?''

ಸಾಬಗ ಲೆಕ್ಕಿಲ್ಲ "ಈಗ ಶಾದಿ ಮಾಡದಿದ್ರ ಅಳಿಯ ಮಗಳ್ನ ಕಟ್ಕೊಳ್ಳೋದಿಲ್ಲಂತೋ ಏ ಬಸ್ಯಾ..." ರಾಗಬದ್ಧವಾಗಿ ಅಳೂದ ಕಂಡು ಹೆಣದ ಮುಂದ ಕುಂತೋರು ಅಳೂದ ಬಿಟ್ಟು "ಏನ ಚಂದ ಅಳತಾರಲ್ಲ" ಅನಿಸಿ ತಮಗೂ ಅಳಾಕ ಬರತೈತಂತ "ನೀ ಹೋಗೂದು ಹ್ವಾದಿ, ಯಾರ್ಯಾರ ಕಡಿಂದ ಅನಿಸಿಕೊಳ್ಳೋದು ಬಂತಲ್ಲೋ ಏ ಯಪ್ಪಾSSSS" ಇರಣ್ಣ, ಸಂಗವ್ವ ರಾಗ ತಗದಾಗ ಕೂಡಿದ ಮಂದಿ ಸಾಬನ್ನ ಅತ್ತಾಕಡೆ ಕರ್ಕೊಂಡು ಹೋದ್ರು.

ಮಧ್ಯಾಹ್ನದ ಬಿಸಿಲು ಹೊಳ್ಳಿತು. ನಿಂಗಪ್ಪನ ಸುದ್ದಿಯಿಲ್ಲ. ಸುದ್ದೀನ ತಿಳಿಸಿದ್ರ ಇಷ್ಟೊತ್ತಿಗೆ ಅಂವಾ ಬರಲಿಕ್ಕೂ ಮಾಗಳರ ಬರತಿದ್ದ. ಬಸಣ್ಣ ಶಿವಪ್ಪನ ಕಡಿ ನೋಡಿದ. ಹೆಗಲ ವಲ್ಲ್ಯಾಲ ಕೈಯಾಡಿಸಿ "ಇನ್ನೆರಡ ತಾಸ ತಡಿಯೋನು, ಸೂರ್ಯಾ ಮುಳುಗು ವ್ಯಾಳ್ಯಾಕ್ಕ ಹೆಣಾ ಎತ್ತಿದರಾತು" ಮಂದೀನೂ ಇದಕ್ಕ ಸೈ ಅಂದಾಗ ಬಸಣ್ಣ ಧೋತ್ರದಾಗ ಮುಖಯಿಟ್ಟ. ಕುರಿ ಬಲಿತಷ್ಟೂ ಕಟುಕನಿಗೆ ಲಾಭ ಆಗುವಂತ ಶಿವಪ್ಪ ಒಳಗ ನಕ್ಕ.

ಇನ್ನೊಂದ ಸಲ ಮಿರ್ಚಿ ತಿಂದು. ಚಾ ಕುಡಿದರಾತಂತ ಮಂದೆಲ್ಲಾ ಚಾದಂಗಡಿಗೆ ಹೆಜ್ಜಿ ಹಾಕಿದ್ರ ಒಳಗ ಅಳೂದು ಹೆಚ್ಚಾಗುತ್ತಿತ್ತು. ಸನಾದಿಯವರ ಸ್ವರ. ತಳವಾರನ ಹಲಗಿ ಮುಗಿಲು ಮುಟ್ಟುತಿತ್ತು.

# ಸೆಳತ

## ಸೋಮಣ್ಣ ಹೊಂಗಹಳ್ಳಿ

ಕ್ಯಾಂಪಸ್ಸಿನಲ್ಲಿ ಏರ್ಪಡಿಸಿದ್ದ 'DEATH THE LEVELLER' ವಿಚಾರದ ಬಗ್ಗೆ ಸೆಮಿನಾರನ್ನು ಮುಗಿಸಿಕೊಂಡು ಕಾಫಿಗಾಗಿ ಕ್ಯಾಂಟೀನ್‌ಗೆ ಪವಿತ್ರ, ಪದುಮ, ಸುಧಾ, ಹೇಮಚಂದ್ರ, ಕಿಟ್ಟಿ ಇವರ ಜೊತೆ ಇಲ್ಲಸಲ್ಲದ ಹರಟೆ ಕೊಚ್ಚುತ್ತ ಹೋಗು ತ್ತಿರುವಾಗ ಪವಿತ್ರ "ಸಾವಿನ ಬಗ್ಗೆ ಯಾರೂ ಇಷ್ಟು ಚೆನ್ನಾಗಿ ಹೇಳಿಲ್ಲ'' ಅಂದ್ಲು. ಮಾತಿನ ನಡುವೆ ನಾವಾರು ಲೆಕ್ಕಿಸಲಿಲ್ಲ. "ಸಾವು ಮಾತ್ರವೇ ಎಲ್ಲರನ್ನು ಸಮಾನಾಗಿ ಕಾಣುವಂತದ್ದು'' ಅಂಥ ಉಸುರಿದ್ಲು ಪದುಮ. ಆಗ "ಎಲ್ಲಾ ಒಂದಿನಾ ಕೂತೆ ಬಿಸಾಕಬೇಕು ಕನಾ ನಡಿಯೋ'' ಅಂತ ಸುಧಾ ಖಡಾಖಂಡಿತವಾಗಿ ಹೇಳಿದಳು. ಅಷ್ಟೊತ್ತಿಗೆ ಎಲ್ಲರೂ ಕ್ಯಾಂಟೀನಿನ ಮೆಟ್ಟಲೇರುತಿದ್ದೆವು, ಎಲ್ಲರೂ ಕಾಫಿ ಕುಡಿದು ಲೇಡಿಸ್ ಹಾಸ್ಟೆಲ್ ಬಳಿ ಹುಡುಗಿಯರನ್ನು ಬಿಟ್ಟು ನಮ್ಮ ಹಾಸ್ಟಲ್ ಕಡೆ ಹೇಮ ಚಂದ್ರ, ಕಿಟ್ಟಿಯ ಜೊತೆ ಕಾಲು ಹಾಕುತ್ತಿದ್ದೆ. ತಲೆಯಲ್ಲಿ ಸಾವಿನ ಬಗೆಯ ಯೋಚನೆಯೇ ತುಂಬಿಕೊಂಡಿತ್ತು. "ಸಾವು ಮಾತ್ರವೇ ಎಲ್ಲವನ್ನು ಮೀರಿದ್ದು'' ಅನ್ನುವ ಮಾತು ತಲೆಯನ್ನು ಹೊಕ್ಕಿತ್ತು.

ಸಾವಿನ ವಿಚಾರ ಬಂದಾಗಲೆಲ್ಲ ನನ್ನಕ್ಕನ ಗಂಡ ಸತ್ತು ಹೋದ ನೆನಪು ತಟ್ಟನೆ ನೆನ ಪಿಗೆ ಬರುತಿತ್ತು. ಅಯ್ಯನ ಸಾವು ಮಾತ್ರ ಕಣ್ಣು ಮುಚ್ಚಿ ಬಿಡುವುದರೊಳಗೆ ನಡೆದು ಹೋಗಿತ್ತು. ಅಕ್ಕನ ಗಂಡನ ಸಾವಿಗಿಂತ ನನ್ನನ್ನು ಕೆಣಕಿ ಕಂಗಾಲು ಮಾಡಿದ್ದು ನನ್ನ ಯ್ಯನ ಸಾವೇ. ಅಯ್ಯ ಮಾಡಿದ್ದು ಒಂದೇ ಎರಡೇ. ಸಾಯೋಕೆ ಮುಂಚೆ ಮಾಡಿಸಿ ಕೊಟ್ಟ ನಾಕಂಕಣದ ಹಳೆಯ ಹಟ್ಟಿ, ನಾಕು ಬಳೆ ಕಡಾಯ, ಕಿವಿ ಅಂಡೆಗಳು, ಮೂರೆಕರೆ ಹೊಲದ ವಿಲ್ಲು ರೇಕಾರ್ಡು, ಯಾರನ್ನೂ ಪ್ರೀತಿಸದಷ್ಟು ನನ್ನ ಪ್ರೀತಿ ಸೋದು ಯಾಕೆ ಅಂಥ ಯಾರಾದರೂ ಕೇಳಿದ್ರೆ "ನನ್ನ ವಂಶದಲ್ಲಿ ಯಾರೂ

ಇಸ್ಕೂಲ್ ಮೆಟ್ಲು ಹತ್ತಿಲ್ಲ. ನನ್ ಹೈದ ಒಂದು ಮಾತ್ರ ಓದಿಕಾಗೆ ಮೈಸೂರು ಬೆಂಗಳೂರುಗೆಲ್ಲ ಹೋಗಿದ್ದಿ ಬಂದಾದೆ. ಒಂದೊಂದ್ ಪೆಟ್ಟಿಗೆ ಗಾತ್ರದ ಪುಸ್ಕ ಎಲ್ಲಾನೂ ಒತ್ರದೆ'' ಅಂಥ ಹೇಳುತ್ತಿತ್ತು.

ಅದೇ ವರ್ಷ ತಾನೆ ಕ್ಯಾಂಪಸ್ಸಿನಲ್ಲಿ ಓದಲು ಬಂದ ನನಗೆ ಅಯ್ಯನ ಸಾವಿನ ಸೂಚನೆ ಸುದ್ದಿ ತಿಳಿದು ಜೀ ಅನ್ನುವ ಮಳೆಯಲ್ಲೂ ಹೋಗಿ ನೋಡಿದಾಗ ಜೀವ ಇನ್ನೂ ಕೊಟ್ ಕೊಟ್ ಅನ್ನುತ್ತಿತ್ತು. ಅಯ್ಯನಿಗೆ ಜ್ಞಾನ ಸಂಪೂರ್ಣ ತಪ್ಪಿತ್ತು. ಅಯ್ಯನ ತಲೆದಸಿಯಲ್ಲಿದ್ದ ಕಂಚಿನ ಚೆಂಬಿನಲ್ಲಿ ಒಂದು ಗುಟುಕು ನೀರು ಬಾಯಿಗೆ ಬಿಟ್ಟಾಗ ಅಯ್ಯನ ಕಟಬಾಯಿಂದ ನೊರೆ, ಜೊಲ್ಲು ಜೊತೆಯಾಗೆ ನೀರು ಈಚೆಗೆ ಬಂತು. ಅಯ್ಯನ ದೇಹವ ಒಳಗಿಂದ ಈಚ್ಗೆ ತಂದು ಮಡಗುತ್ತಿದ್ದುದು ನೆನಪು ತಟ್ಟನೆ ಹಾರಿ ಹೋಯ್ತು. ಅಕ್ಕನ ಗಂಡ ಸತ್ತೂ ಈ ಸಾರಿಯ ಭೀಮನಮವಾಸೆಗೆ ನಾಕು ವರುಷ ತುಂಬಿತು ಎಂದು ಯೋಚಿಸುತ್ತ ಹಾಸ್ಟೆಲ್ ರೂಮಿನ ಕದ ತೆಗೆದಾಗ ಕೆಳಗಡೆ ಬಿದಿದ್ದ ಪತ್ರವನ್ನು ಕಂಡು ಎದೆ ದಸಕ್ಕೆಂದರೂ ಕಾಗದವನ್ನು ಹೊಡೆದು ಓದಲು ಆರಂಭಿಸಿದೆ.

ಕಾಗದ ಬರೆದಿದ್ದವನು ನಮ್ಮ ಕೇರಿಯವನೇ ಆದ ಮರಿಕಾಳನ ಮಗ ಶಿವ. "ಅವ್ವನಿಗೆ ಮೈಗೆ ಉಸಾರಿಲ್ಲ. ಆದೇನೋ ಭಾವು ಅಂಥಾದಲ್ಲ ಅದು ಎದ್ದದೆ. ಕಾಜ್ಗ ಕಂಡ ಕೂಡಲೇ ಬರುವುದು'' ಎಂದು 'ಅವ್ವನೇ ಬರೆಸಿದ್ದಾಳೆ' ಅಂಥಾನೂ ಬರೆದಿದ್ದ. ಪತ್ರದ ಒಕ್ಕಣೆ ಮಾಮೂಲಿಯಾಗಿರಲಿಲ್ಲ. ಹಿಂದಾಗಿದ್ದರೆ 'ಅಕ್ಕನಿಗೆ ಉಸಾರಿಲ್ಲ ಕಾಜ್ಗ ಕಂಡ ಕೂಡಲೇ ಬಾ' ಎಂದೂ, ಮಧ್ಯೆ ಹೊಲದ ಶೆವರಿ ಮಾತಿಗೆ ದೊಡ್ಡಪ್ಪನ ಮಕ್ಕಳ ಜಗಳ, ಗದ್ದೆ ತೆವರಿ ಜಾಸ್ತಿ ಕಡಿದು ಹಾಕವ್ರೆ ಅಂಥಲೊ, ಕೊನೆಯ ಗವ್ದೆಗೆ ನೀರುಕೊಡದೆ ಗದ್ದೆ ಒಡೆಯುಲ್ಲ. ಜಳ್ಳು ಆಗದೆ ಅಂಥನೂ ಇಲ್ಲವೇ, ಕರಿಯ ಕಡಸು ಈಲಾಗದೆ, ಇಂಥ ದಿನ ಗಿಣ್ಣು ಮಾಡುತ್ತೇನೆ ಬಾ. ನಮ್ಮ ರಾಗಿ ಮೆದೆಗೆ ಬೆಂಕಿ ಹಾಕವ್ರೆ ದಾಯಾದಿಗಳು, ಅಂತೂ ಹತ್ತರಲ್ಲಿ ಒಂದು ಬರೆಸಿ ಕಳುಹಿಸುತ್ತಿದ್ದಳು.

ಅವ್ವನ ಮೈಗೆ ಉಸಾರಿಲ್ಲ ಅನ್ನೋದ ಓದಿದ ಕೂಡಲೇ ಮೈರೋಮ ನೆಟ್ಟಗಾಯ್ತು. ಎಡಗಣ್ಣು ರಪರಪನೆ ಹಾಕತೊಡಗಿತು. ಯಾವುದೋ ಗ್ರಾಚಾರ ಕಾದಿದೆ ಎಂದುಕೊಂಡೆ. ನನ್ನ ಮನಸ್ಸಿನಾಳದಲ್ಲಿ ಅಸ್ತಿತ್ವವಾದ. ವಾಸ್ತವ ಪ್ರಜ್ಞೆಯ ಬಗ್ಗೆ ಓದಿ ನಾ ಹರಟೆ ಕೊಚ್ಚುತ್ತಿದ್ದ ತನ್ನ ಒಣ ನಾಸ್ತಿಕತೆಗೆ ನಾನೇ ನಾಚಿದೆ. ಸ್ವತಃ ನಾನೇ ಅವ್ವನ ಜೊತೆ ಚಿಕ್ಕವನಾಗಿದ್ದಾಗ ಮೂಡಲಳ್ಳದ ಜೀ ಯೆನ್ನುವ ಬಿದಿರು ಮಳೆ ಗದ್ದೆಯ ತಾವು ಮುಸುಕು ಹೊತ್ತಿನಲ್ಲಿ ಕರಿಕೋಳಿಯ ರಕ್ತದ ಕೂಳು ಮಾಡಿ ದಾಯಾದಿಗಳ ಗದ್ದೆಯ ಮಧ್ಯದ ಮಾಡೆಗೆ ನಾನೇ ಎರಚಿದ್ದು ದುತ್ತನೆ ನೆನಪಿಗೆ ಬಂತು. ಚಿಪ್ಪಾಗಿ ಸುಮ್ಮನೆ ಅವ್ವ ಪೂಜೆ ಮಾಡುತ್ತಿದ್ದಾಗ ನಾನು ಅವ್ವನ ಸ್ವಾಟಿಗೆ

ತಿವಿಯುವಂತೆ "ಅವ್ವ, ಇಷ್ಟೆಲ್ಲ ಮಾತ ಮಂತ್ರ ಮಾಡಿದ್ರೂ ಅಪ್ಪನ್ನ ಯಾಕೆ ಉಳಿಸ್ಕಳ್ಳಿಕ್ಕೆ ನಿನ್‌ಕೈಲಿ ಆಗಲಿಲ್ಲ ?'' ಅಂದೆ. ಆಗ ಅವ್ವನಿಂದ ಥರಾವರಿ ಮಾತು ಕೇಳಿದ್ದೆ. "ಅಯ್ಯೋ ಅನ್ನೇಕಾರನನ್ನ ಮಗನೇ, ನಿನ್ ತಿಥಿಗಲ್ವ ನಾವು ಪಡಬಾಳು ಪಡ್ತಾ ಇರೋದು, ನಿನ್ ದೊಡ್ಡವ್ನಾಗಿ ಮಾಡ್ಕಲ್ವ ಈ ರೀತಿ ಮಾಡ್ತಿರೋದು. ಇಲ್ಲಾಂದ್ರೆ ನಿಮ್ ದೊಡ್ಡಪ್ಪರು ದಕ್ಕಿಸ್ತಿದ್ರೇನೋ ಈ ಬಿದಿರು ಮಳೆ ಗದ್ದೆನಾ, ಆ ಹೊಳೆತಾವಿನ ಮೆಣಸಿಗೆ ತಿಟ್ಟನ ಹೊಲನಾ, ಈ ನಾಕು ಕಂಬದ ಹಳೆ ತೊಟ್ಟಿ ಹಟ್ಟಿನಾ, ಇಲ್ಲಾಂದ್ರೆ ನೀನು ಚಕ್ರಿ ತಕ್ಕೊಂಡು ಭಿಕ್ಷೆ ಮಾಡ್ಬೇಕಾಗಿತ್ತು." ಅವ್ವನ ಮಾತ ಕೇಳಿ ನಾನು 'ಉಂ' ಅಂಥ ತಲೆ ಅಲ್ಲಾಡಿಸಬೇಕಾಯ್ತು.

ಕ್ಯಾಂಪಸ್ಸಿನಲ್ಲಿ ಪದುಮಗಳಿಗೆ ಮೊನ್ನೆ ಸರ್ಕಸ್ಸು ನೋಡಲು ಕರೆದುಕೊಂಡು ಹೋಗುತ್ತೇನೆಂದು ಹೇಳಿ ನೆನ್ನೆ ಪವಿತ್ರಾಳ ಜೊತೆ ಸಿನಿಮಾಕ್ಕೆ ಹೋಗಿ ಬಂದಿದ್ದೆ. ಪದುಮಳ ನಿರ್ಮಲ ಪ್ರೀತಿಯ ಮುಂದೆ ಪವಿತ್ರಾಳ ನಯ ನಾಜೂಕೇ ಗೆದ್ದು ನನ್ನನ್ನು ಮರುಳು ಮಾಡಿತ್ತು. ಪವಿತ್ರಾಳ ಮನೆಯವರು ಸೋಷಿಯಲ್. ನಗರದಲ್ಲೇ ಹುಟ್ಟಿ ಬೆಳೆದು ಹೊಂದಿಕೊಂಡು ಮಡಿ ಮೈಲಿಗೆ ಆಸಹ್ಯ ಯಾವುದೂ ಕೂಡ ಆ ಮನೆಯವರಲ್ಲಿ ಇಲ್ಲ. ಪದುಮಳ ಮನೆಯವರು ಒಂದು ರೀತಿಯ ಸೋಷಿಯಲ್ ಅನ್ನಲಾಗದ ಆರ್ಥಡಕ್ಸ್ ಅನ್ನಲೂ ಆಗದ ಮಧ್ಯದಲ್ಲಿ ನಿಲ್ಲುವ ಸ್ಥಿತಿ. ಒಂಥರಾ ಸಂಕೋಚದ ಬದುಕಿನಲ್ಲಿರುವವರು. ಯಾವ ಹೆಗ್ಗೂ ಇಲ್ಲದೆ ಪವಿತ್ರಾಳ ಮನೆಗೆ ನಾನು ಆಗಾಗ್ಗೆ ಹೋಗಿ ಬಂದು ಮಾಡುತ್ತಿದ್ದೆ. ಪವಿತ್ರಾಳಿಗಿಂತಲೂ ಮೂರು ನಾಲ್ಕು ವರ್ಷ ಹೆಚ್ಚಿರಬಹುದಾದ, ಅರ್ಥಂಭರ್ಥ ಮರಾಠಿ ಬರುವ, ಸ್ವಲ್ಪ ಸ್ವಲ್ಪ ಅರ್ಥ ಸಿಗದೇ ಇರುವ ಇಂಗ್ಲೀಷ್ ತಿಳಿದಿರುವ, ಯಾವುದೋ ಫ್ಯಾಕ್ಟರಿಯ ದೊಡ್ಡ ಹುದ್ದೆಯಲ್ಲಿರುವವರ ಹೆಂಡತಿ ಪವಿತ್ರಾಳ ವಾರಗದವಳೇ ಆದರೂ ದಿನದ ಮುಕ್ಕಾಲು ಪಾಲು ಪವಿತ್ರಾಳ ಮನೆಯಲ್ಲೇ ಕಾಲ ಕಳೆಯುತ್ತಿದ್ದಳು. ಮೊದಮೊದಲು ಆ ಹೆಂಗಸನ್ನು ಮಾತನಾಡಿಸಲು ನನಗೆ ಮುಜುಗರವಾಗುತ್ತಿತ್ತು. ಅವಳು ಧರಿಸಿದ ತೋಳಿರದ ರವಿಕೆ, ಕ್ರಾಪು ಮಾಡಿದ ಎಣ್ಣೆ ಹಾಕದೆ ಬಾಚದೇ ಇರುವ ಗುತ್ತಿ ಗುತ್ತಿಯಂತಹ ಕೂದಲು, ದುಂಡನೆಯ ಗೋಧಿ ಬಣ್ಣದ ಮುಖ, ಗುಳಿ ಬೀಳುವ ಕೆನ್ನೆಗಳನ್ನು ಕಂಡು ನನಗೆ ದಿಕ್ಕು ತೋಚದಂತಾಗುತಿತ್ತು

ಪವಿತ್ರಾಳ ತಾಯಿಯ ರೂಪ ನನ್ನ ಅಪ್ಪನನ್ನ ನೆನಪಿಗೆ ತರುತ್ತಿತ್ತು. ಮನೆಗೆ ಹೋದಾಗ 'ಬಾ ರಂಗಾ, ಪವಿತ್ರ ಗೆಳತಿಯ ಮನೆಗೋಗಿದ್ದಾಳೆ, ಇನ್ನೇನು ಬರುವ ಹೊತ್ತಾಯ್ತು'' ಅಂದು ಒಳಗೆ ಕರೆದು ಕೂರಿಸಿ ಟೀಪಾಯ್ ಮೇಲಿದ್ದ ಪತ್ರಿಕೆಯನ್ನು ತಂದು ಕೊಡುತ್ತ ''ಇಲ್ಲಿ ನೋಡು ನಿಮ್ಮ ತುಂಟ ಗೆಳೆಯ ಹೇಮಚಂದ್ರ ಬರೆದ 'ಪ್ರಣಯ' ಕವನ ಪ್ರಕಟವಾಗಿದೆ. ನಾ ಓದಿದೆ, ನೀನು ಓದುತ್ತಾ ಇರು

ಈಗ ಬರುತ್ತೇನೆ' ಎಂದು ಒಳಗೆ ಹೋದರು. ನನ್ನ ಗೆಳೆಯ ಬರೆಯೋದೆಲ್ಲ ಬರೀ ಹುಡುಗಿಯರ ಬಗ್ಗೆಯೇ ಎಂದು ಅಂದುಕೊಂಡು ಪತ್ರಿಕೆಯ ಮೇಲೆ ಕಣ್ಣಾಡಿಸುತ್ತ ಇದ್ದಾಗ ಪವಿತ್ರಾಳ ತಾಯಿ ಕಾಫಿ ತಂದರು. ಅನಂತರ ಅವರೇ "ಆ ಕವನವನ್ನು ನಮ್ಮ ಸ್ನೇಹಿತೆ ನೈಟಿಂಗೇಲ್‌ಳಿಗೂ ಓದಿ ಹೇಳಿದ್ದೇನೆ' ಅಂದರು. ಆಗಲೇ ನನಗೆ ಆ ತೋಳಿಲ್ಲದ ರವಿಕೆಯ ಹೆಂಗಸಿನ ಹೆಸರು ತಿಳಿದದ್ದು. ದಿನವಿಡೀ ಆಕೆಯ ರೂಪ ಕಣ್ಣಿಂದ ಹೋಗಲೇ ಇಲ್ಲ. ಆಕೆಯ ರೂಪವೇ ಮತ್ತೆ ಮತ್ತೆ ಮುತ್ತುತ್ತಿತ್ತು. ಆಕೆಯಲ್ಲಿ ಎಂಥದೋ ಕಾಮವೋ ಮೋಹವೋ ಗೊತ್ತಿಲ್ಲದೆ ಮನಸ್ಸಿನೊಳಗೆ ಜ್ವಾಲೆ ಹತ್ತಿತು. ಇಂದೇಕೆ ಹೀಗೆ ಎಂದು ಯೋಚಿಸಿದೆ. ವಿಚಿತ್ರ ಕಲ್ಪನೆಗಳು, ಬರಬಾರದ ಅನಿಸಿಕೆಗಳು ಒಳಗೆ ಶುರುವಾದವು. ಜನರೆದುರು ವಿಚಾರವಂತರಂತೆ ನಡೆದುಕೊಳ್ಳುತ್ತೇವೆ, ಒಳಗೊಳಗೇ ಈ ವಿಚಿತ್ರ ವ್ಯಕ್ತಿತ್ವ ಎಂದು ನನಗೆ ನಾನೇ ಅಂದುಕೊಂಡೆ. ಈ ಮನಸ್ಥಿತಿಯಿಂದ ಬಿಡುಗಡೆ ಕಾಣಲು ಹವಣಿಸಿದೆ. ಆಗಲಿಲ್ಲ. ನಾನು ಬಿಡುಗಡೆಗಾಗಿ ಹವಣಿಸಿದಷ್ಟು ಹೆಚ್ಚಾಗಿ ನೈಟಿಂಗೇಲ್‌ಳ ರೂಪ ನನ್ನೊಳಗೆ ಕುಣಿಯುತ್ತಿತ್ತು. ಪವಿತ್ರಾಳನ್ನು ಕೇಳಿ ನೈಟಿಂಗೇಲ್‌ಳ ಬಗ್ಗೆ ಪೂರ ತಿಳಿದುಕೊಂಡೆ. ಅವಳ ಗಂಡ ಫ್ಯಾಕ್ಟರಿಯ ಬಿಸಿನೆಸ್ ಮೀಟಿಂಗ್, ಪಾರ್ಟಿ ಅಂಥ ವಾರಗಟ್ಟಲೆ ಹೊರಗೇ ಇರುತ್ತಾನಂತೆ. ಮತ್ತೆ ಆ ನೈಟಿಂಗೇಲ್‌ಳ ಬಗ್ಗೆ ಅಡ್ಡಾದಿಡ್ಡಿಯಾಗಿ ಮಾತನಾಡಲು ಪವಿತ್ರ ಶುರು ಮಾಡಿದಳು.

ಪನುಮಳಿಗೆ ಮಾತು ಕೊಟ್ಟು ಪವಿತ್ರಾಳ ಜೊತೆ ಕದ್ದು ಸಿನೇಮಾಕ್ಕೆ ಹೋದುದರಲ್ಲಿ ವಿಶೇಷವಿತ್ತು. ಯಾಕೆಂದರೆ ನಮ್ಮ ಜೊತೆಗೆ ನೈಟಿಂಗೇಲ್ ಕೂಡ ಬಂದಿದ್ದಳು. ಥಿಯೇಟರ್‌ನಲ್ಲಿ ನಾನು ಮಧ್ಯೆ ಕುಳಿತಿದ್ದೆ. ಬಲಬದಿಯ ನೈಟಿಂಗೇಲ್, ಎಡಕ್ಕೆ ಪವಿತ್ರ. ಪವಿತ್ರ ಅಂಜಿಕೆಯಲ್ಲೇ ಇದ್ದದ್ದನ್ನು ಕಂಡು ಪವಿತ್ರ "ಅವರು ತುಂಬ ಸೋಷಿಯಲ್. ಮುಜುಗರ ಬೇಡ ಇಫ್ ಯು ಡೋಂಟ್ ಮೈಂಡ್" ಎಂದದ್ದಕ್ಕೆ ನೈಟಿಂಗೇಲ್ ನನ್ನ ಕಡೆಗೆ ನೊಡಿ ಮುಗುಳ್ನಕ್ಕಳು. ನೈಟಿಂಗೇಲ್‌ಗೆ ಸ್ವಲ್ಪ ನನಗಿಂತ ಹೆಚ್ಚು ವಯಸ್ಸಾಗಿದ್ದರೂ ಮೋಹಕವಾಗಿದ್ದಳು. ಆಕೆಯನ್ನು ಮೊದಲು ನೋಡಿದಾಗ ನಮ್ಮ ಮನೆಯ ಕರಿಯ ಕನ್ನಗಡಸಿನಂತೆ ಕಾಣುತ್ತಿದ್ದಳು. ಪವಿ ತುಂಟ ಹಸುವಾದರೂ ಕೊಂಬಿನ ಸಂದಿಯಲ್ಲಿ ಕೈಯಿಟ್ಟು ಬೆಟ್ಟಿನಿಂದ ತುರಿಸುತ್ತಿದ್ದರೆ ಹಾಲು ಕರೆದದ್ದೇ ಗೊತ್ತಾಗುತ್ತಿರಲಿಲ್ಲ. ಇಲ್ಲವಾದರೆ ಚೊಂಬು ಸಹಿತ ಮೊಕಾಡೆ ಬೀಳುವಂತೆ ಒದ್ದು ಬಿಡುತ್ತಿತ್ತು. ನೈಟಿಂಗೇಲ್‌ಳ ದೇಹಕ್ಕೆ ಹೇಳಿ ಮಾಡಿಸಿದಂತಹ ರಸ ಪುಟಿಯುವ ಗದ ಗದ ಎನ್ನುವ ತುಂಬು ಮೊಲೆಗಳು. ಅರ್ಧ ತೋಳಿರದ ರವಿಕೆ ದಾಟಿ ಇಣುಕಿ ನೋಡುತ್ತಿರುವ ತಾಮ್ರ ವರ್ಣದ ಕಂಕಳು ಕೂದಲುಗಳು. ಒಕ್ಕಳಿನ ಗುಳಿ ಕಾಣುವಂತೆಯೇ ಉಟ್ಟಿರುವ ಸೀರೆಯಲ್ಲಿ ನನಗೆ ಅಂಟಿಕೊಂಡೇ

ತುಂಟು ತೀಟೆ ಕೈ ಅವಳ ಹೊಟ್ಟೆ ಸವರಿ ಸವಿಯನ್ನು ನೋಡುತ್ತಿತ್ತು. ಹಾಗೆ ಕೈ ಮೇಲಕ್ಕೆ ಹೋದಂತೆ ಅವಳ ತುಂಬು ಮೊಲೆಗಳ ಸ್ಪರ್ಶ ನನ್ನನ್ನು ಮೂಕ ನನ್ನಾಗಿಸಿತು. ಈ ಅಪರೂಪದ ಕ್ರಿಯೆಗೆ ನನ್ನ ಬಗ್ಗೆ ನಾನೇ ನಾಚಿಕೊಂಡೆ, ಅಂಬೇಡ್ಕರ್, ಲೋಹಿಯಾರನ್ನು ಓದಿದ ನನಗೆ ಅಪರಾಧ ಭಾವ ಕಾಡಿತು.

ಪವಿತ್ರಳ ಜೊತೆ ಇನ್ನು ಮುಂದೆ ಸಿನಿಮಾಕ್ಕೆ ಹೋಗಬಾರದೆಂದುಕೊಂಡೆ. ಈ ನಡುವಿನ ಪ್ರೇಮ ಯಾವ ರೀತಿಯದು? ಅಂದುಕೊಂಡೆ. ತಪ್ಪು ಯಾರದು ಅಂತ ಪ್ರಶ್ನಿಸಿಕೊಂಡೆ. ಪವಿತ್ರಾಳ ಸ್ನೇಹಕ್ಕೆ ಅವತ್ತೆ ಎಳ್ಳು ನೀರು ಬಿಡಲು ನಿರ್ಧರಿಸಿದೆ. ಈ ಪಾಪದ ಕೃತ್ಯ ತಲೆಗೆ ಹೊಕ್ಕು ಕಾಡತೊಡಗಿತು. ಪದು ಮಾಳ ಮನೆಯವರ ಮಡಿವಂತಿಕೆಯೇ ಮೇಲು ಅನಿಸಿತು. ಪದುಮಾಳ ಅಮ್ಮ ''ಪದುಮ, ನಿಮ್ಮ ರಂಗೂಗೆ ಕೊಟ್ಟ ತಟ್ಟೆ ಲೋಟ ಅಲ್ಲಿ ಬ್ಯಾರೆ ಇಡು'' ಅಂದ್ರೂ ಅವರ ಮನೆಯವರೇ ಸರಿ ಅನ್ನುವ ಮನಸ್ಸಿಗೆ ಏನಂತ ಹೇಳಲಿ ಎಂದು ನಾಚಿಕೆಯಾಗಿ ಸುಮ್ಮನಾದೆ.

ಊರಿಂದ ಬಂದ ಕಾಗದ ತಿವಿದು ತೀಟೆ ಮಾಡುವಂತೆ ಹಂಗಿಸುತ್ತಿತ್ತು. ಶಿವ ಬರೆದಿದ್ದ ಎರಡೇ ಚುಟುಕು ಸಾಲುಗಳು, ಅವ್ವಗೆ ಉಸಾರಿಲ್ಲ ಆದೇನೋ ಭಾವು ಎದ್ದಾದೆ ಕಾಜ್ಗ ಕಂಡ ಕೂಡಲೇ ಹೊರಟು ಬಾ. ''ಭಾವು ಎದ್ದ ಮೇಲೆ ಕಥಾ ಮುಗಿತು" ಅಂಥ ದಾಯಾದಿಗಳು ಅಂಥವ್ರೆ ಎಂಬುದನ್ನೂ ಬರೆದಿದ್ದ. ಕಾಗದ ಓದಿದಂತೆಲ್ಲ ಮನಸ್ಸು ತಳಮಳಗೊಳ್ಳುತ್ತಿತ್ತು. ಅವ್ವನ ನೆನಪುಗಳು— ಸಣ್ಣ ಮಗುವಾಗಿದ್ದಾಗ ಹಕ್ಕಿಸೋಕು ಆಗಿದ್ದ ನನಗೆ ಗುಬ್ಬಚ್ಚಿಯನ್ನು ಹೊಡೆದು ತಂದು ತಿನ್ನಿಸಿದ್ದು ನೆನಪಿಗೆ ಬಂದ ಕೂಡಲೇ ಅವ್ವನನ್ನು ನೋಡಬೇಕೆನ್ನಿಸಿತು. ಪದುಮಳಿಗೆ ಬೇರೆ ನಾಳೆ ಸರ್ಕಸ್‌ಗೆ ಹೋಗೋಣ ಎಂದು ಹೇಳಿದ್ದೆ. ಅವ್ವ ಇರಾದಾಗಿ ಮಾತಾಡ್ತಾ ''ನೀನು ಓದು ಇಲ್ಲ ಅಂದ್ರೆ ಬುಟುಬುಟಿ ಬಂದು ಇರೋ ಹೊಲಗದ್ದೆ ಮಾಡ್ಕಂಡಿ ನಮ್ಮ ಹಳೇ ಸಂಬಂಧದ ನಿಂಗಿಯ ಮದ್ವೆ ಮಾಡ್ಕಂಡಿ ಹಳ್ಳಿಲೀರು ಇಲ್ಲಾಂದ್ರೆ ನಿಮ್ಮ ದೊಡ್ಡಪ್ಪ ಚಿಕ್ಕಪ್ಪರು ನಿನ್‌ಗೆ ನಾ ಸತ್ಮೇಲೆ ಮೆರತಿಗೆ ನಾಮ ಬಳೀತಾರೆ ಅಷ್ಟೆ'' ಅಂತಿದ್ಲು. ಕ್ಯಾಂಪಸ್ಸಿನಿಂದ ಹೋದ ವರ್ಷ ಒನ್ ಡೇ ಪಿಕ್‌ನಿಕ್‌ಗೆಂದು ಬೃಂದಾವನ, ಬಲ್ಮುರಿ ನೋಡಲು ಬಂದಿದ್ದಾಗ ಕಾವೇರಿ ಮಡಿಲಿನ ನಮ್ಮ ಹಳ್ಳಿಗೂ ಕೆಲವು ಗೆಳೆಯ ಗೆಳತಿಯರನ್ನು ಕರೆದುಕೊಂಡು ಹೋಗಿದ್ದಾಗ ಅಪ್ಪ ಹಾಕಿದ್ದ ಛೀಮಾರಿ ನೆನಪಾಯ್ತು. ನನ್ನನ್ನು ಒತ್ತಟ್ಟಿಗೆ ಕರೆದು ''ಲೋ ಮಗಾ, ಈ ಹೆಂಗ್ಸರ್ಗೆ ಮೂರು ಮೂರು ಮಕ್ಕಳಾಗ್ವಂಗವ್ರೆ ಅರ್ಧಂಬರ್ಧ ಲಂಗ ಹಾಕ್ಕಂಡಿ ತಿರುಗ್ತಾವ್ರಲ್ಲ. ಕೈಲಿ ಬಳೇ ಇಲ್ಲ, ಹಣೇಲಿ ಕುಂಕುಮಯಿಲ್ಲ, ಮುಂಡೆರ್ಗೆ ಮಾನಿಲ್ಲ ಮರ್ಯಾದಿ ಇಲ್ಲ. ಪರಾಯಕ್ಕೆ ಬಂದ ಗಂಡು

ಮಕ್ಳ ಜೊತೇಲಿ ಸೂಳೆರ್ಗೆ ಬಿಟ್ಟ ಬಸವಿಯರಂಗೆ ತಿರುಗ್ತವ್ರಲ್ಲ. ಇವ್ರಿಗೇನು ನಾಚ್ಗೆ ಹೇಸ್ಗೆ ಇಲ್ವಾ ನನಗಂಗೂ ಚೋಜ್ಗ ಆಗ್ತದೆ'' ಅಂದಿದ್ಲು. ನಾನು ಹೋಗ್ಲಿ ಬಿಡವ್ವ ಎಂದು ಅವ್ವನನ್ನು ಸುಮ್ಮನಿರಿಸಿದ್ದೆ.

ನಮ್ಮ ಮನೆಯ ಕರಿಯ ಕಡಸು ತಪ್ಪಿಸಿಕೊಂಡು ಹೊಳೆಯ ಆಚೆನಲ್ಲಿ ಹುಡುಕಲು ಕೇರಿಯ ಸಿದ್ದ, ರಾಚ, ಗಿರಿಯ, ಚೌಡ, ದುರುಗರ ಜೊತೆ ನಾನೂ ಹೋಗಿ ಕತ್ತಲಲ್ಲಿ ದೊಡ್ಡಾಲದ ಮರದ ತಾವು ಒಣಗಿದ ಕೊಂಬೆ ಮುರಿದು ಬಿದ್ದಾಗ ಹೆದರಿ ಮನೆಗೆ ಬರುವಷ್ಟರಲ್ಲಿ ಕಣ್ಣು ನಂಜು ಬಳಿದಂತಾಗಿ ಚಳಿಜ್ವರದಿಂದ ನಡುಗಲು ತೊಡಗಿದಾಗ ಅವ್ವ ಮೊಗೆ ಹಾಕಿದ್ದು, ವರಗಾಸು ತೆಗೆದದ್ದು, ಕಾಲು ಸುಟ್ಟದ್ದು, ಹೊಲೇರ ದೇವಿಯನ್ನು ಕರೆಸಿ ನನ್ನ ಉದ್ದದಷ್ಟು ನೋಲು, ಕಾಸು, ನಾಲ್ಕಾರು ಜಾತಿಯ ಧಾನ್ಯ ಎಲ್ಲವನ್ನು ಸೇರಿಸಿ ಫಲದಾನ್ಯ ಮಾಡಿ ಹಸಿರು ಮೆಳೆಗೆ ತಂದು ಕಟ್ಟಿದ್ದು. ಒಂದೇ ಎರಡೇ ಅವ್ವನ ಶಾಸ್ತ್ರ. ಅಂಥ ಅವ್ವಗೆ ಭಾವು ಎದ್ದದೆ ಅನ್ನುತ್ತಾರಲ್ಲ! ಅವ್ವ ಮೈ ಸರಿ ಇಲ್ಲಾ ಅಂತ ಮಲಗಿದ್ದೇ ಇಲ್ಲ. ಗಂಡಾಳಿನಂತೆ ಮೇಣಿ ಹಿಡಿದು ನೊಗ ನೇಗಿಲು ಹೂಡಿ ಉತ್ತಿದ್ದಾಳೆ, ಗುದ್ದಲಿ ಹಿಡಿದು ತೆವರಿ ಕೊಚ್ಚಿದ್ದಾಳೆ, ಬದುಗಳನ್ನು ಕಟ್ಟಿದ್ದಾಳೆ, ಗಂಡಾಳಿನಂತೆ ನಾಟಿ ಹಾಕಿಸಿ ನೀರು ಹಾಯಿಸಿದ್ದಾಳೆ, ದನ ಕರ ಕುರಿಮರಿ ಕೋಳಿ ಕೊಕ್ಕ ಸಾಕಿದ್ದಾಳೆ. ಅಂತಹ ಅವ್ವಗೆ ಭಾವು ಎದ್ದಿದೆ ಅಂದರೆ ನಂಬಲಿಕ್ಕೇ ಆಗಲಿಲ್ಲ.

ಅವ್ವನನ್ನು ನೋಡಲು ಬೇಗ ಬೇಗ ರೆಡಿಯಾದೆ. ಹೊರಡುವ ಮುನ್ನ ನೈಟಿಂಗೇಲ್ ಳನ್ನು ನೋಡಿ ಪವಿತ್ರಾಳಿಗೆ ಹೇಳಿ ಹೋಗಬೇಕೆನ್ನಿಸಿತು. ಟ್ಯಾಕ್ಸಿ ಮಾಡಿಕೊಂಡು ಸುರಿಯುವ ಮಳೆಯಲ್ಲೂ ಹಳ್ಳಿ ತಲುಪಿದಾಗ ಕತ್ತಲು ಕವಿಚಿಕೊಂಡಿತ್ತು. ಹಿಡಿದು ಕೊಂಡಿದ್ದ ಜಡಿ ಮಳೆಯ ಸೋನೆ ಸಿಪುರು ಸಿಪುರಾಗಿ ಎಡಬಿಡದೇ ಚೆಚ್ಚತೊಡಗಿತ್ತು, ಕ್ಯಾಂಪಸ್ಸಿನಲ್ಲಿ ಕೆಲವು ಸೈನ್ಸ್ ಹುಡುಗರು ಸೈಕ್ಲೋನ್ ಎಫೆಕ್ಟ್ ಅನ್ನುತ್ತಿದ್ದುದು ನೆನಪಾಯಿತು. ನಮ್ಮಳ್ಳಿಯಲ್ಲೂ ಮಾವಾಳು ಮಳೆಯಾಗಿ ಕೊಡಗಿನ ಕಡೆಯಿಂದ ಹೊಳೆಯಲ್ಲಿ ತೆಂಗಿನ ಮರಗಳು ತೇಲಿಕೊಂಡು ಬಂದುದನ್ನು ಕಟ್ಟೆಯಲ್ಲಿ ಕೆಲಸ ಮಾಡಲು ಹೋಗುತ್ತಿದ್ದವರೆಲ್ಲ ಹೇಳುತ್ತಿದ್ದರು. ಈ ವರ್ಷ ಮುಂಗಾರು ಘನವಾಗದೆ. ಈರೀತಿಯ ಯಮ ಮಳೆಯಾಗಿ ಮೂರ್ನಾಲ್ಕು ವರ್ಷವೇ ಆಗಿತ್ತು. ಘನವಾದ ಆರಂಭ. ಬೆಳೆ ಬೆಳೆದು ಪಚ್ಚೈಸಿ ಎದೆ ಮಟ್ಟ ನಿಂತಿದೆ. ಟ್ಯಾಕ್ಸಿ ಹೊಲಗೇರಿಯ ತಿರುವಿನಲ್ಲಿ ಬಲಚೋರಿ ಇರುವ ಗಾಡಿ ಹಾದಿಯಲ್ಲಿ ಬಂದು ನಮ್ಮ ಪಟೇಲ್ ಚಂದ್ರೇಗೌಡರ ತೊಟ್ಟಿಹಟ್ಟಿಯ ಬಾವಿ ಬಳಿ ಇರುವ ಹುಲ್ಲೆಸರಿನ ಮೇಲೆ ತಿರುಗಿಕೊಂಡು ಮತ್ತೆ ಮೈಸೂರಿನ ಕಡೆ ನಿಂತಿತು ಮುಖ ಮಾಡಿಕೊಂಡು. ಟ್ಯಾಕ್ಸಿಯಿಂದ ಇಳಿದು ಮಳೆಯಲ್ಲಿ ಪಿಚಕ್ ಪಿಚಕ್ ಅನ್ನುವ ಹೊದ್ದೆ ಮಣ್ಣಿನಲ್ಲಿ

ಕಾಲಾಕಿದೆ, ಪರಿಚಯ ತಪ್ಪಿದ ನನ್ನ ಹಳ್ಳಿಯ ಕಲ್ಲು ದಾರಿಯಲ್ಲಿ ಅಡ್ಡ ದಿಡ್ಡಿಯಾಗಿ ನಡೆಯುತ್ತಾ ದಾಯಾದಿಗಳ ಮನೆಯ ಸೊಂಪಲಿನಲ್ಲಿ ಕಾಲಾಕಿದೆ.

ಮನೆಯ ಮಾಡೆಲ್ಲ ಕುಸಿದು ಬೀಳುವಂತೆ ಮಳೆ ಜೋರಾಗಿ ಬೀಳುತಿತ್ತು. ಅಯ್ಯನ ಕಾಲದ ಹಳೆಯ ಲ್ಯಾಂಪು ಮಿಳಮಿಳನೆ ಉರಿಯುತಿತ್ತು. ನಾಲ್ಕು ಕಂಭದ ತೊಟ್ಟಿಯಲ್ಲಿ ನೀರು ಜೋರನ್ನೆ ಸುರಿಯುತ್ತಿತ್ತು. ತೊಟ್ಟಿಯ ಪಕ್ಕದಲ್ಲಿದ್ದ ಹಳೆಯ ಒಲೆಯ ಹಳಗೆಯಲ್ಲಿ ನೀರು ಕಾಯಿಸುತ್ತಿದ್ದರು. ನಿಂಗಿ ಒಲೆಯನ್ನು ದಗದಗನೆ ಉರಿಯುವಂತೆ ಕಾದುಕೊಂಡಿದ್ದಳು, ಅವ್ವ ಮಂಚದ ಮೇಲೆ ಉಳ್ಳಾಡದೇ ಒಂದೇ ಮಗ್ಗುಲಲ್ಲಿ ಮಲಗಿದ್ದಳು. ಅವ್ವನ ನೋಡಿದಾಕ್ಷಣ ಮೈ ರೋಮವೆಲ್ಲ ಜೊಳ್ ಅಂಥ ನೆಟ್ಟಗಾದೊ. ಅವ್ವನ ತಲೆದಸಿಯಲ್ಲಿ ಡಾಕ್ಟರ್ ಶಾಪಿನಿಂದ ತಂದಿದ್ದ ಮೂರ್ನಾಲ್ಕು ತರದ ಬಣ್ಣದ ಗುಳಿಗೆಗಳು ಇನ್ನೂ ಅರ್ಧ ಕೂಡ ಖಾಲಿಯಾಗದೆ ಬಿದ್ದಿದ್ದವು. ಅವ್ವನ್ನ ಏನಾದ್ರು ಮಾಡಿ ಬದ್ಕಿಸ್ಕಬೇಕು ಅನ್ನೋ ಯೋಚನೆ ಕಾಡತೊಡಗಿತು. ''ಇವತ್ತು ವಸಿ ಸುವ್ನಿರು ಮೊಗಾ. ವತಾರೀಕೆ ಬೇಕಾದ್ರೆ ಮೈಸೂರ ದೊಡ್ಡ ಆಸ್ಪತ್ರೆಗಾದರೂ ಬೆಂಗ್ಳೂರು ಈಕ್ತೋರಿಯ ಆಸ್ಪತ್ರೆಗಾರೂ ಕರ್ಕೊಂಡು ಹೋಗುವೆ. ಈ ಸುರಿಯೋ ಮಳಾಲಿ ಹುಡುಗಾಟಿಕೆ ಆಡಬ್ಯಾಡ, ವತ್ತಾರೀಕಂಟ ಸುವ್ನಿರು ಮೊಗಾ. ಆಳ್‌ಮಳೆ ಬ್ಯಾರೆ ಅದೇನ್ ಕೇಡಿಗ್ ಉಯ್ತು ಇದ್ದದೊ ನಾನ್ ಬ್ಯಾರೆ ಕಾಣೇ ಬಾಣನೇ ಮೊಗಚಿಕೊಳ್ವಂಗೆ ಕಾಣ್ತದ'' ಎಂದು ಅವ್ವನ ಗೆಣತಿ ತಿಮ್ಮಜ್ಜಿ ಹೇಳಿದರೆ ದಾಯಾದಿ ನಿಂಗಪ್ಪ ''ಬುಡುಮೊಗಾ ಈ ಡಾಕುಟ್ರು ಔಂಸ್ತಿ ಚೂಜಿಗೆಲ್ಲ ಬೊಗ್ಗೋ ಕಾಯಿಲೆಯಲ್ಲ ಕನಾ, ಬಾವು ಏಳ್ತು ಅಂದ್ರೆ ಕಥಾ ಮುಗಿತು ಕನಾ ''ಅಂಥ ಅಂದು ತನ್ನ ಒಳಗಿನ ಮಚ್ಚರವನ್ನು ಎದುರಿಗೆ ನಯವಾಗಿ ಅಂದು ತೀರಿಸಿಕೊಂಡ. ''ಏನೇ ಅಗ್ಲಿ ನಾವ್ ಮಾಡೋ ಕೆಲ್ಸ ಮಾಡ್ಬೇಕಲ್ವ'' ಅಂದ ರಂಗಸ್ವಾಮಿಗೆ ''ಅಯ್ಯೋ ಸುಮ್ಕಿರು ಮೊಗಾ, ಈ ಕತ್ಲ ಕಮಂಜಿಯೊಳ್ಗೆ ನೀ ಎನ್ ಮಾಡಿ ? ವತಾರೀಕೆ ಏನ್ ಬೇಕಾದ್ರು ಮಾಡ್ವೆ'' ಎಂದು ಮತ್ತೆ ದಾಯಾದಿ ನಿಂಗಪ್ಪ ಮಾತನಾಡಿದ ''ಅವ್ವ ಸತ್ರೆ ಆಸ್ತಿ ನಮ್ಗೆ ಆಗ್ತಾದೆ ಅಂಥ ಮಾಡವ್ನೆ ನೆರೆಸತ್ರೇ ಕಂಕಟತ್ವ ಅನ್ನೊ ಮನುಸಿ ಎಂದುಕೊಂಡು ತಂದಿವ್ದ ಕಿತ್ತಲೆ ದ್ರಾಕ್ಷಿ ಹಣ್ಣಿನ ರಸವನ್ನೆ ಅವ್ವಂಗೆ ಎರಡು ಗುಟುಕು ಕುಡಿಸಿದೆ. ಕಾಗದ ಬರೆದು ಕಳುಹಿಸಿದ್ದ ಶಿವ ಬಂದು ನಾಕು ಸಮಾಧಾನದ ಮಾತಾಡಿ ಹೋದ. ಅವ್ವ ಸಣ್ಣಗೆ ನರಳುತ್ತ ಒಂದೇ ಮಗ್ಗುಲಲ್ಲಿ ಮಲಗಿದಳು. ನಿಂಗಿ ತಲೆ ಚೋರಿಯಲ್ಲಿ ಕುಂತಿಕೊಂಡು ಅವ್ವನ ತಲೆ ನೇವರಿಸುತಿದ್ಲು. ಅವ್ವ ಬಹಳ ಕಷ್ಟಪಟ್ಟು ಒಂದು ಸಾರಿ ನನ್ನ ಕಡೆಗೆ ನೋಡಿ "ಅಪ್ಪ ನನ್ನ ಒಂದು ಮಾತು ನಡಿಸ್ಕೊಡು, ನಿನ್ ದಮ್ಮಯ್ಯ ಅಂತೀನಿ. ನಾನ್ ಬಿದ್ದೋಗಮುರ ಗಾಳಿ ಬೀಸಿದ್ರೆ ಮಟೋಗ್ತೀನಿ. ನೀನ್

ನಮ್ಮ ಹಳೆ ಸಂಬಂಧ ನಿಂಗಿ ಕೈ ಹಿಡ್ದು ಸತ್ತ ಹಿರೀಕರಿಗೆ ಒಂದು ಹಬ್ಬದಲ್ಲಿ ದೂಪ ನಾದ್ರೂ ಹಾಕಿದ್ರೆ ಅಷ್ಟೆ ಸಾಕು. ಈ ಮನೆ ದೀಪ ಉರಿಸೋದು ಕೆಡಿಸೋದು ನಿನ್ ಕೈಲದೆ" ಎಂದು ನಿಂಗಿಯ ಮುಖವನ್ನು ನೋಡಿದ್ಲು. ಮಾತುಗಳು ಬರಲಾರದೆ ಬರುತ್ತಿದ್ದವು. ಅವ್ವನ ಕಣ್ಣುಗಳಲ್ಲಿ ನೀರು ಇಳಿಯುತ್ತಿತ್ತು. ನಿಂಗಿಯೂ ಅಳುತ್ತಿದ್ದಳು.

ರಾತ್ರಿ ಸಮ ಸಮವಾಗಿರುವ ಹೊತ್ತು. ಪಕ್ಕದ ಕೇರಿಯ ಗರಡಿ ಮನೆಯಲ್ಲಿನ ಹಾಡುಗಳ ನಾದ, ಕೇಕೆ ಅಸ್ಪಷ್ಟವಾಗಿ ಕಿವಿಗೆ ಕೇಳಿಸುತ್ತಿತ್ತು. ಹೊಲಗೇರಿಯಲ್ಲಿ ಕಲಿಸುತ್ತಿರುವ ಹಳೆಯ ನಾಟಕ 'ರಾಜಸೂಯಯಾಗ'ದ ಫುಲ್ ಪ್ರಾಕ್ಟೀಸು ಕಣ್ಣು ಮುಚ್ಚಲು ಅವಕಾಶ ಕೊಡಲಿಲ್ಲ. ನಿಲ್ಲದೆ ಬೀಳುವ ಕುಟುಗಲು ಜಡಿ ಮಳೆ ಹುಲ್ಲಿನ ಮಾಡಿನ ಮೇಲೆ ದುಪುದಪು ಅನ್ನುತ್ತಿತ್ತು. ಶಿಸ್ ಎನ್ನುವ ಥಂಡಿಗಾಳಿ, ಹಜಾರದ ಮಂಚದವರೆಗೂ ಸಿಡಿದು ಬರುವ ಆಲಿಕಲ್ಲುಗಳು ಏನೇನೋ ನೆನಪನ್ನು ತಂದು ನನ್ನನ್ನು ಸಣ್ಣವನನ್ನಾಗಿ ಮಾಡಿತು. ಮನುಷ್ಯನ ಬದುಕು ಚೈತನ್ಯ ಭರಿತವಾದುದು. ಏಕಾದರೂ ವರ್ಷ ಉರುಳುತ್ತವೆ. ರಾತ್ರಿ ಹಗಲುಗಳಾಗುತ್ತವೆ, ಸಣ್ಣವರು ದೊಡ್ಡವರಾಗ್ತಾರೆ, ಮುಖದ ಮೇಲೆ ಬದಲಾವಣೆಗಳು ಬೇರೆ ಅಂಥ ಎಲ್ಲಾ ಬದಲಾಗುವ ಯೋಚನೆ-ಯಾವುದೋ ಕನಸಿನ ಲೋಕಕ್ಕೆ ಹೋಗುತಿದ್ದೇನೇನೋ ಅನ್ನಿಸಿತು. ಕೊನೆಯನ್ನು ತಲುಪುವ ತವಕದಲ್ಲಿದ್ದೆ.

ಹಸುವಿನ ಚಿಣಿಗೆಯಿಂದ ಓಡಿ ಬಂದ ಯುಗ್ಗಣ ಜೋಡಿಗಳು ಪ್ರಣಯದ ತವಕದಲ್ಲೋ ಅಥವಾ ಕಳ್ಳ ಮಾಲು ಸಾಗಿಸುವಲ್ಲಿ ತೊಡಗಿದ್ದವೋ ಏನೋ. ಅಂತು ಬಂದು ನಮ್ಮ ತಾತ ಮುತ್ತಾತರಿಗೆಲ್ಲ, ಹಸಿತಲೆಯ ಅಸುಗೂಸಿಗಳಿಗೆಲ್ಲ, ಸೊಸೆಯಂದಿರಿಗೆಲ್ಲ, ಅಳಿಯಂದಿರಿಗೆಲ್ಲ, ಹೋದವರಿಗೆ ಬಂದವರಿಗೆ, ಹೊಸಬರಿಗೆ ಹಳಬರಿಗೆ ಅಂಥ ನೀರು ಮೀಯಿಸಿದ್ದ ನೀರು ಕಾಯಿಸುವ ಹಳೆ ಒಲೆ ಮೇಲಿದ್ದ ಹಳಗೆಯನ್ನು ಡಿಕ್ಕಿ ಹೊಡೆದು ಕೆಳಕ್ಕೆ ಬೀಳಿಸಿ ಪರಾರಿಯಾದವು. ಅವು ಪರಾರಿಯಾಗುವ ರಭಸದಲ್ಲಿ ಹಜಾರದಲ್ಲಿದ್ದ ಸಾಲು ಹಳಗೆಗಳನ್ನು ಕೆಡವಿ ಬಿಟ್ಟವು. ಹಳಗೆಗಳಲ್ಲಿ ಮಾಡಗಿದ್ದ ಕಬ್ಬಳು, ಕಾಯಿಚೆಳ್ಳು ಎಲ್ಲ ಚೆಲ್ಲಾಪಿಲ್ಲಿಯಾದವು. ಕೊತ್ತಿಯಿಂದ ಪ್ರಾಣ ಉಳಿಸಿಕೊಂಡು ಪರಾರಿಯಾದ ಯುಗ್ಗಣಗಳು ದೂರದಲ್ಲಿ ಚಲಿಪಿಲಿ ಕಿಚಿಪಿಚಿ ಅನ್ನುವ ಸದ್ದು ಕೇಳಿಸುತ್ತಿತ್ತು.

ಬಸವಣ್ಣನ ಹುಲ್ಲಿನ ಹಿತ್ತಲ ಮೂಲೆಯಲ್ಲಿದ್ದ ಹುಣಸೇ ಮರದಲ್ಲಿ ಕುಳಿತು 'ಗೊರ್ ಗುದ್ದತಗಿ, ಗೊರ್ ಗುದ್ದತಗಿ' ಅನ್ನುವ ಗೂಗೆಯ ಸದ್ದೂ ಕಿವಿಗೆ ಬಡಿಯುತಿತ್ತು. ಈ ರೀತಿ ಗೂಗೆ ಕೂಗಿದ್ರೆ ಯಾರಾದ್ರೂ ಸಾಯ್ತಾರೆ ಅನ್ನದನ್ನ ಅಪ್ಪನೇ ಹೇಳು

ತ್ತಿದ್ದೆ. ಆ ನೆನಪೂ ಬಂದು ಹೋಯ್ತು. ಮಳೆ ನೀರಿನಿಂದ ತುಂಬಿದ್ದ ಹಿತ್ತಲ ತಿಪ್ಪೆ ಗುಂಡಿಯಲ್ಲಿ ಕಳೊಕ್ಕಲಾಗಿರುವ ಕಪ್ಪೆಗಳು ವಟವಟ ಗುಟ್ಟುತ್ತಿದ್ದವು. ಇದ್ದಕ್ಕಿದ್ದಂತೆ ಪವಿತ್ರ ಪದುಮ ನೈಟಿಂಗೇಲ್ ನೆನಪಿಗೆ ಬರತೊಡಗಿದರು. ಪದುಮಗಳಿಗೆ ಸರ್ಕಸ್‌ಗೆ ಹೋಗಲು ಹೇಳಿದ್ದೆ. ಪವಿತ್ರಾಳಿಗೆ ಹೇಳದೆ ಬಂದೆ ಅನ್ನುವ ಯೋಚನೆ. ಅಪ್ಪ ಅಂದಿದ್ದ 'ನಮ್ಮ ನಿಂಗಿ ಮದ್ವೆಯಾಗಿ ಹಳ್ಳೀಲೆ ಇರು ಮೊಗಾ ಓದಿದ್ದು ಸಾಕು' ಎನ್ನುವ ಮಾತುಗಳ ನೆನಪು. ಎಲ್ಲ ತಲೆ ತುಂಬಿ ಅಳು ಬರುವಂತಾಯ್ತು.

ಅಪ್ಪನ ನರಳುವಿಕೆ ಕೇಳಿಸುತ್ತಿತ್ತು. ಸೆಮಿನಾರಿನಲ್ಲಿನ ಭಾಷಣದ ಮಾತು 'DEATH THE LEVELLER' ಕವನದ ಸಾಲುಗಳನ್ನು ಓದಬೇಕೆನ್ನಿಸಿತು. ಅಪ್ಪನ ತಲೆ ಚೋರಿ ಕುಂತಿದ್ದ ನಿಂಗಿಗೆ ಮಸಿ ಲ್ಯಾಂಪ್‌ನ ಬತ್ತಿ ಎತ್ತರಿಸು ಅಂದೆ. ನಿಂಗಿ ಮೌನವಾಗೇ ಎದ್ದು ಹೋಗಿ ಕಿಟ್ಟ ಕಟ್ಟಿದ ಬತ್ತಿಯನ್ನು ಕ್ಲೀನ್ ಮಾಡಿ ಎತ್ತರಿಸಿದ್ಲು. ಮತ್ತೆ ಅಪ್ಪನ ತಲೆ ಚೋರಿ ಹೋಗಿ ಕುಂತಳು ನಿದ್ದೆಗೆಟ್ಟು ಆಕೆ ತೂಕಡಿಸುತ್ತಿದ್ಲು. ಲ್ಯಾಂಪಿನ ಬೆಳಕಿನಲ್ಲಿ ಆವಳ ಬಾಡಿದ ಮುಖ ನೋಡಿ ನಾನ್ ನೋಡ್ಕತ್ತೀನಿ ನೀ ಮಲಿಕ್ಕಾ ನಿಂಗಿ ಅಂದೆ. ನಿಂಗಿ ಮಾತನಾಡದೆ ತಲೆ ತಗ್ಗಿಸಿದಳು.

ಹತ್ತು ವರ್ಷಗಳ ಹಿಂದಿನ ನಿಂಗಿಯ ನೆನಪು ಬಂತು. ನಾನಾಗ ಕಾಲೇಜು ಮಟ್ಟಕ್ಕೆ ಹೋಗಿರಲಿಲ್ಲ. ನಮ್ಮ ಹಳ್ಳಿಯಲ್ಲೇ ಓದುತ್ತಿದ್ದೆ. ನಿಂಗಿ ಆಗ ಚಿಕ್ಕ ಹುಡುಗಿ. ಮಕೆ ಹಬ್ಬದ ಕಾಲವಾದ್ದರಿಂದ ಹಿಡಿದ ಮಳೆ ಪುರಸೊತ್ತು ಕೊಡದೆ ಒಂದೇ ಸಮನೆ ಸುರಿಯುತ್ತಿದೆ. ಅಪ್ಪ ತೋಟದ ಗದ್ದೆಯ ಪಕ್ಕದ ಹಳ್ಳಕ್ಕೆ ಕೊಡವೆ ಹಾಕಿ ಮೀನು ಹಿಡಿಯಲು ಹೋಗಿದ್ದಾಗ ಮೀನಿನ ಜೊತೆಯಲ್ಲಿ ಕೊಡವೆ ಹೊಳಕ್ಕೆ ಬಂದು ಒಳ್ಳೆ ಹಾವುನೂ ಸೇರಿಕೊಂಡಿತ್ತು. ಅಪ್ಪ ಕೊಡವೆಯನ್ನು ಸುರಿದು ವಳ್ಳೆ ಹೊಡೆದು ಸಾಯಿಸಿದ ಮೇಲೆ ವಳ್ಳೆಯ ಬಾಲ ಹಿಡಿದು ನಿಂಗಿಯ ಕಿವಿಗೆ ಹಾಕಲು ಹೋದೆ. "ಕಿವಿಗೆ ಹಾಕಿದ್ರೆ ಕಿವಿ ಚೆನ್ನಾಗಿ ಕೇಳಿಸ್ತಾವಂತೆ ಕಣೆ" ಅಪ್ಪ ಹೇಳ್ತಿತ್ತು ಅಂದೆ 'ನೀನೆ ಹಾಕ್ಕೊ' ಅಂದ್ಲು. ನಾನು ಮಸಿ ಜೋರು ಮಾಡ್ದೆ, ನಿಂಗಿ ಅಪ್ಪನಿಗೆ ಹೇಳಿದ್ಲು. ನಾನು ಬಾಲಮುದುರಿಕೊಂಡ ನಾಯಿಯಂತಾಗಿ ಕೊಡವೆ ಹೊತ್ತುಕೊಂಡು ಬಂದೆ. ಈಗ ನಿಂಗಿ ಮೊದಲಿನಂತಿಲ್ಲ. ಕಪ್ಪು ಮೈಬಣ್ಣದ ಹಳ್ಳಿ ಬದುಕಿಗೆ ಹೇಳಿ ಮಾಡಿಸಿದ ಮಣ್ಣಿನ ಬೊಂಬೆಯಂತಿದ್ಲು. ಹದವಾಗಿ ಮಾಗಿದ [ಮಾವಿನ ಹಣ್ಣಿನಂತಹ] ಮೊಲೆಗಳು ಅವಳು ತೊಟ್ಟ ರವಿಕೆಯನ್ನು ಕೀರುವಮಾಡದೇ ನಿಂತಿದ್ದವು. ಇವಳಿಗೂ ನನ್ನ ಕಾಲೇಜಿನ ಜೊತೆಗಾತಿಯರಾದ ಪವಿತ್ರ, ಪದುಮಳಿಗೂ, ನೈಟಿಂಗೇಲ್‌ಳಿಗೂ ಒಂದಲ್ಲ ಒಂದು ರೀತಿಯಲ್ಲಿ ವ್ಯತ್ಯಾಸ ಇದ್ದೇ ಇತ್ತು. ನನ್ನ ಮನಸ್ಸು ಇವರನ್ನೆಲ್ಲ ನೋಡಿ ನೋಡಿ ಮುಂದಿನದು ಅರ್ಥವಾಗದ ಹಾಗೆ ಕಂಡಿತು,

ಈಗ ಈ ಹಳ್ಳಿಯ ಹೆಣ್ಣನ್ನೇ ಮದ್ವೆಯಾಗಿ ನಮ್ಮ ಹಳ್ಳಿಯಲ್ಲೇ ಇದ್ದರೆ ಹೇಗೆ ? ಅನ್ನುವ ಪ್ರಶ್ನೆಯೂ ಬಂತು. ನನ್ನೊಳಗೆ. ಪವಿತ್ರಾಳನ್ನು ಮದ್ವೆಯಾದರೆ ಈ ಹಳ್ಳಿಯ ಮನೆ ಖಾಯಂ ಆಗಿ ಖಾಲಿಯಾಗುತ್ತದೆ. ಅವರೆಲ್ಲ ಒಂದು ರೀತಿಯ ಹಳ್ಳಿಯ ಜೀವನ ಸಹಿಸಿಕೊಳ್ಳದ ನಗರ ಜೀವನಕ್ಕೆ ಮೋಹಿತರಾಗಿರುವವರು. ಪದುಮ ಸಧ್ಯಕ್ಕೆ ಸರಿ ಅನ್ನುವಂತಾದರೂ ಬೇರೆ ಜಾತಿಯವಳು. ಜೊತೆಗೆ ಮನೆಯವರ ನಡವಳಿಕೆ ಕಟ್ಟುಪಾಡುಗಳಿಗೆ ತಕ್ಕಂತೆ ಹೆಜ್ಜೆ ಹಾಕುವವಳು. ಬರೀ ತೋರಿಕೆಯ ಜೀವನ ನಡೆಸುವವರು. ಎಲ್ಲ ಪೊಳ್ಳು ಭರವಸೆಗಳಿಂದ ತುಂಬಿ ಹೋದಂತಹವುಗಳು ವಾಸ್ತವ ಬದುಕೇ ಬೇರೆ. ಕಾಲೇಜಿನ ದಿನಗಳು ಕೇವಲ ನೆನಪಷ್ಟೆ ! ಅನಿರೀಕ್ಷಿತವಾಗಿ ಒದಗಿ ಬಂದಂತಹವುಗಳು. ಈ ಹಳ್ಳಿಯ ಗಿಡ ಮರವಾಗಿ ಬೆಳೆಯುವ ಮೊದಲೇ ಪಟ್ಟಣದ ಕಟ್ಟುಕಟ್ಟಳೆಗಳಿಲ್ಲದ ದೊಡ್ಡ ಬದುಕಿನಲ್ಲಿ ಬದುಕಲು ಒಗ್ಗುವಾಗಲೇ ಕೊಂಬೆಕೊಂಬೆಗಳು ಕೀಲು ಕೀಲುಗಳಿಗೆ ಸಿಗಿದು ಸಿಗಿದು ಬೀಳುತ್ತಿದ್ದವು.

ಹಳ್ಳಿಯ ಬದುಕು ಮೊದಮೊದಲು ಸುಲಭವಾಗಿ ಕಾಣಲಿಲ್ಲ. ತಾತ ಮುತ್ತಾತರ ಕಾಲದ ಬದುಕು ಯಾವ ರೀತಿ ಇತ್ತೋ ಅದೇ ರೀತಿಯದು. ಒಂದು ಚಿಂಕ್ರವು ಹೆಚ್ಚು ಕಮ್ಮಿಯಾಗಿರಲಿಲ್ಲ. ಅದೇ ಹಳೆಯ ಹಟ್ಟಿಗಳು. ಅವೇ ಹಳೇ ಬಾಗಿಲುಗಳು, ದುಂಬಿಕೊರೆದ ಅದೇ ತೂತು ಬೊಂಬುಗಳು, ಅರ್ಧ ಚಾವಣಿಗೆ ಹೊಸ್ಸಿದ್ದ ಸೋದೆ, ಅಂಚಿ ಕಡ್ಡಿ ಹುಲ್ಲು, ಮತ್ತರ್ಧಕ್ಕೆ ಹೊದಿಸಿದ ಅರೆ ಹೊಡೆದ ಕವಡಾಲು ಸೀಮೆ ಹಂಚುಗಳು. ಅಂಥೂ ಜೀವನ ಸಾಗುತಿತ್ತು. ತಿಂದು ಉಂಡು ಮಲಗಿದರೆ ಅಲ್ಲಿಗೆ ಮುಗಿಯಿತು ಹಳ್ಳಿಯವರ ಬದುಕು. ಯಾವ ಬದಲಾವಣೆಯೂ ಆಗುವುದು ಬೇಡ. ಯಾವುದರ ಅವಶ್ಯಕತೆಯೂ ಬೇಕಾಗಿರಲಿಲ್ಲ. ನಾಯಿ ಕಚ್ಚಿದ್ದಕ್ಕೆ ಔಸ್ತಿ ಕೊಡಲು ಹೊಲೇರ ತಿಪ್ಪಣ್ಣ, ಹಾವು ಚೇಳು ಮುಟ್ಟಿದರೆ ಗಂಗಡಿಕಾರ ಒಕ್ಕಲಿಗರ ಚಿಂಗೇಗೌಡ, ಜ್ವರ ಚಳಿ ವಾಂತಿ ಬೇಧಿ ಅಳುಕು ಭೀತಿ ಮಾಟ ಮಂತ್ರಕ್ಕೆ ಅಗಸರ ಹುಚ್ಚಲಮ್ಮರ ಗುಡ್ಡಯ್ಯ, ಪೂಜೆ ಪುರಸ್ಕಾರ ಯಾರಾದರೂ ಹೊಟ್ಟೆ ಕಿಚ್ಚಿಗೆ ಮದ್ದು, ಹಸಿರು ಔಸ್ತಿ ಹಾಕಿಸಿದರೆ ತೆಗೆಸಲು ಮಾದಿಗರ ಜವರಣ್ಣನಿದ್ದಾನೆ, ಊರಿನಲ್ಲಿ ಯಾರಿಗೂ ಪ್ರವೇಶವಿಲ್ಲ. ಇವರದೇ ಖಾರುಬಾರು. ಯಾವ ಬದಲಾವಣೆ ಯಾರಿಗೂ ಬೇಡ. ಬದಲಾವಣೆ ಕಂಡದ್ದು ಎಂದರೆ ಇದ್ದ ಮನೆಗಳು ಕೆಲವರವು ಎರಡಾಗಿವೆ. ಮೂರಾಗಿವೆ. ಮತ್ತೆ ಕೆಲವರವು ಗಂಡುಮಕ್ಕಳ ಸಂಖ್ಯೆಗನುಗುಣವಾಗಿ ತಲೆ ಎತ್ತಿವೆ. ಒಂದು ದಿನ ಕಳೆಯುವುದೇ ಒಂದು ವರ್ಷ ಕಳೆದಂತಾಯ್ತು, ಹಳ್ಳಿಯ ಬದುಕು. ಪದುಮಳಿಗೆ ಸರ್ಕಸ್‌ಗೆ ಕರೆದುಕೊಂಡು ಹೇಳಿದ ಮಾತು ನೆನಪಿಗೆ ಬಂತು. ಅವ್ವನ "ಮೊಗಾ, ನಾನ್ ಬಿದ್ಹೋಗ ಮರ, ನನ್ ಬಿಟ್ಟು ಈ ಸ್ವಾದರತ್ತೆ ಮಗ್ಳು ನಿಂಗಿಯನ್ನ ಮದ್ವೆಯಾಗಿ ಸುಖವಾಗಿರು" ಅನ್ನುವ ಮಾತುಗಳೂ ನೆನಪಿಗೆ

ಬಂದವು. ಪದುಮಾಳಿಗೆ ಊರಿಗೋಗುತ್ತೇನೆಂದು ಹೇಳದೆ ಬಂದಿದ್ದೇನೆ. ಪವಿತ್ರಾಳ ಮನೆಯ ಜೀವನ ಬಾಳೇ ಹಣ್ಣು ಸುಲಿದಷ್ಟು ಸುಲಭ, ಪದುಮಾಳ ಮನೆಯಲ್ಲಿ ಎಲ್ಲದಕ್ಕೂ ಕಡಿವಾಣ ಆದರೂ ಈಚೀಚೆಗೆ ಪದುಮಾಳ ಮೇಲೆಯೇ ಹೆಚ್ಚು ಹೆಚ್ಚು ಮನಸ್ಸು. ಪವಿತ್ರಾಳ ಸ್ನೇಹದ ಸಹವಾಸದಿಂದ ಪರಿಚಯವಾದ ನೈಟಿಂಗೇಲ್‌ಳ ಸ್ನೇಹ-ಸಲಿಗೆ ಒಂಟಿಯಾಗಿದ್ದ ನನಗೆ ಬೇರೊಂದು ಲೋಕವನ್ನೇ ಸೃಷ್ಟಿಸಿತ್ತು.

ನೈಟಿಂಗೇಲ್‌ಳ ಸೋಷಿಯಲ್ ಬಿಹೇವಿಯರ್‌ನಿಂದ ನನಗೆ ದೊರೆತ ಅವಕಾಶಗಳು ಭರ್ಜರಿ ಅನ್ನಬೇಕು. ನೈಟಿಂಗೇಲ್‌ಳ ಮನೆಗೆ ಒಂಟಿಯಾಗಿ ಹೋದಾಗ ತನ್ನ ಗಂಡ ತಂದ ಗೋವಾ ಫೆನ್ನಿಯನ್ನು 'ಸ್ವಲ್ಪ ಸ್ವಲ್ಪ ಕುಡಿಯಿರಿ' ಎಂದು ಕುಡಿಸಿ ತಲೆ ಸವರುತ್ತಾ ನನಗೆ ಒತ್ತಿಕೊಂಡೇ ಕೂರುತ್ತಿದ್ದಳು. ಮೊದಲು ಮುಜುಗುರ ವಾದರೂ ಅವಳು ತುಂಬ ಸೋಷಿಯಲ್ ಎಂದು ತಿಳಿದಿದ್ದರಿಂದ, ಈಗ ಸ್ವಲ್ಪ ಕುಡಿದಿದ್ದರಿಂದ ಮತ್ತು ಅವಳ ಗಂಡ ಊರಲ್ಲಿ ಇರುವುದೇ ಇಲ್ಲವಲ್ಲವೆಂಬ ತೀರ್ಮಾನ ಮಾಡಿ ನಾನೂ ಅವಳಿಗೆ ಅಂಟಿಕೊಂಡೇ ಕೂರುತ್ತಿದ್ದೆ. ಅವಳ ಸ್ಪರ್ಶ ನನಗೆ ಹೊಸದು. ಶ್ರೀಮಂತ ಮಹಿಳೆಯಾದ ಈಕೆ ಯಾಕೆ ನನ್ನನ್ನು ಇಷ್ಟ ಪಟ್ಟಳು? ನನ್ನಲ್ಲಿ ಅಂಥದೇನು ಕಂಡಿ ಆಕೆ ಆ ಮಾತು ಅಂದಳು ? "ನನ್ನ ಗಂಡನಿಂದ ಇಂಥಾ ಸುಖ ಸಿಗಲಿಲ್ಲ ಯಾವತ್ತೂ ಕೂಡ. ಕಾಣದ ಲೋಕವನ್ನು ತೋರಿಸಿದ್ದೀ" ಎಂದು ಕುಡಿದ ಮತ್ತಿನಲ್ಲಿ ನನ್ನನ್ನು ಬಾಚಿ ತಬ್ಬಿಕೊಂಡು ಮೇಲೆ ಳೆದುಕೊಳ್ಳುತ್ತಿದ್ದಳು. ನನಗೂ ಕಾಣದ ಲೋಕ ಕಂಡಂತಾಗುತ್ತಿತ್ತು. ಪಾಠ ಹೇಳಿಕೊಡುವ ಮೇಡಮ್ಮ ಹೇಳಿದ್ದಕ್ಕೆ ತಲೆ ಹಾಕುವ ಹುಡುಗನಷ್ಟೆ ಆಗಿದ್ದೆ. ರೋಮವಿಲ್ಲದ ಗೋದಿಬಣ್ಣದ ಬಾಳೆಯ ದಿಂಡಿನಂತಹ ಬೆತ್ತಲಾದ ಬೆಚ್ಚನೆಯ ತೊಡೆಗಳು ಅಪರೂಪದ ಅನುಭವವನ್ನು ತಂದೂ ಮತ್ತೆ ಮತ್ತೆ ಸವಿಯ ಬೇಕೆನಿಸಿತು.

ನೈಟಿಂಗೇಲ್, ಪವಿತ್ರ, ಪದುಮ ನೆನಪಾಗಿ ಜೊತೆಗೆ ಹಳ್ಳಿ ಯಾಕೋ ಒಂದೇ ದಿನಕ್ಕೆ ಬೇಸರವಾಗಿ ಮೈಸೂರಿಗೆ ಬಂದೆ. ಬಂದವನೇ ಪವಿತ್ರಾಳ ಮನೆಗೆ ಹೋದೆ. ಪವಿತ್ರಾಳ ತಾಯಿ ಕಾಫಿ ಕೊಟ್ಟು ಒಂದು ಕಾಗದ ಕೊಟ್ಟಳು "ನನ್ನ ಗಂಡನ ಕೆಲಸದ ನಿಮಿತ್ತ ನಾವು ಬಗ್ಗೆ ದೇಶಕ್ಕೆ ಹೋಗುತ್ತಿದ್ದೇವೆ. ಮತ್ತೆ ನನೆ ನಿನ್ನಂತಹ ಸೋಷಿಯಲ್ ಹುಡುಗ ಸಿಗುವುದು ಅಪರೂಪ. ಸಿಕ್ಕರೆ ನನ್ನ ಪುಣ್ಯವೇ ಸರಿ. ನೆನಪುಗಳಿವೆ. ನೆನಪಿರಲಿ" ಎಂದು ನೈಟಿಂಗೇಲ್ ಬರೆದಿದ್ದಳು ಆಕಸ್ಮಿಕವಾಗಿ ಪವಿತ್ರಾಳ ಸ್ನೇಹದಿಂದ ಆದ ನೈಟಿಂಗೇಲ್‌ಳ ಸಂಬಂಧ ಇಷ್ಟು ಬೇಗ ತಪ್ಪುತ್ತ ದೆಂದು ನಾನು ಎಣಿಸಿರಲಿಲ್ಲ. ಮತ್ತೆ ಸಿಟಿ ಬೇಸರವಾದಂತೆ ಅನಿಸಿ ಹಳ್ಳಿಗೆ ಹೊರಡಲು ಅಣಿಯಾದೆ.

ದಾಯಾದಿಗಳು ಈ ಭಾರಿ ಘನವಾದ ಆರಂಭ ಮಾಡಿದ್ದಾರೆ. ಇಡೀ ಹಳ್ಳಿ ಹಸಿರಾಗಿತ್ತು. ಸ್ವಲ್ಪ ತಡಮಾಡಿದ್ದರಿಂದ ನನ್ನ ಪಾಲಿನ ನಾಕು ಸೀಳು ಹೊಲದಲ್ಲಿ ಕಾಂಗ್ರೆಸ್‌ಗಿಡ. ಕಟ್ಟಿ ಮುಳ್ಳು ಎತ್ತರಾಗಿ ಬೆಳೆದು ನಿಂತಿತ್ತು. ಆಗಾಗ್ಗೆ ಕಿರುಕುಳ ಕೊಡುತ್ತಿದ್ದ ದಾಯಾದಿಗಳು "ಸ್ವಲ್ಪ ಓದಿಕೊಂಡವನು ಏನಾದ್ರು ವ್ಯಾಖ್ಯಾನ" ಎಂದು ಬೆಚ್ಚುತ್ತಿದ್ದರು. ಕಾಲೇಜಿನಲ್ಲಿ ಓದಿದ ದಿನಗಳಲ್ಲಿ ಆಗುತ್ತಿದ್ದ ಮಾತುಗಳು ಈಗ ಪೊಳ್ಳಾಗಿ ಕಾಣಲಿಕ್ಕೆ ಆರಂಭವಾದವು. ವಿಚಾರಗೋಷ್ಠಿಯಲ್ಲಿ 'ಜೀತ ವಿಮುಕ್ತಿ' ಬಗ್ಗೆ ಸ್ವತಃ ನಾನೇ ಮಂಡಿಸಿದ್ದ ಪ್ರಬಂಧದಲ್ಲಿನ ವಿಚಾರಗಳು ತಿರುಳಿಲ್ಲದವು ಎನಿಸಿದವು. ಈಗ ನಾನೇ ನಮ್ಮ ಹೊಲೇರ ಗಿರಿಯ, ಚಲುವ, ದುರುಗ, ರಾಚರನ್ನು ಗದ್ದೆ ಹೊಲಗಳ ಕೆಲಸಕ್ಕೆ ಜೀತಕ್ಕೆ ಕರೆದುಕೊಂಡಿರುವುದನ್ನು ನೋಡಿದರೆ 'ಅಪ್ಪ ಹಾಕಿದ ಆಲದ ಮರಕ್ಕೆ ನೇಣು ಹಾಕ್ಕೊಂಡಂತಾಯ್ತು' ನಾನು ಖಂಡಿತ ಸೋತಿದ್ದೇನೆ ಅನಿಸಿತು. ಅಪ್ಪ ಆಗಾಗ ಹೇಳುತ್ತಿದ್ದ "ಪುಸ್ಕದ ಬದನೆಕಾಯಿ ಎಸರಿಗಾದದ ಹೇಳೊ" ಅಂದ ಹಾಗೆಯೇ ಪುಸ್ತಕ ಬರೇ ಓದ್ದೋಕೆ ಚೆಂದಾ ಆಚರಣೆಗಲ್ಲ ಅನ್ನುವುದು ಖಚಿತವೆನಿಸಿ "ಸೋಲನ್ನು ಒಪ್ಪಿಕೋ, ನೀನು ಸೋತೆ" ಎಂದು ಚುಚ್ಚಿ ಚುಚ್ಚಿ ಗಾಯ ಮಾಡುತ್ತದೆನಿಸಿ ಮನಸ್ಸು ಖಾಲಿ ಖಾಲಿಯಾದಂತೆನಿಸಿತು.

ಎಡಬಿಡದೆ ಸುರಿಯುವ ಜಡಿ ಮಳೆಯ ನಡುವೆ ಯಾರೋ ಕೂಗಿದ್ದು ಕೇಳಿಸಿತು ಕದ ತಟ್ಟಿದ ಸದ್ದಾಯ್ತು. ಅದೇ ಅಪ್ಪ ಮಲಗಿದ್ದ ಹಳೇ ಕಾಲದ ಮಂಚದ ಮೇಲಿಂದ ಎದ್ದು ಕುಳಿತೆ. ಅಪ್ಪ ಸತ್ತದ್ದರ ನೆನಪು ಮತ್ತೀಗ ಮುತ್ತಿತು. ನಿಂಗಿ ಗೋಣಿಯ ಚೀಲವನ್ನು ತಲೆಯ ಮೇಲೆ ಗುಪ್ಪೆಯಾಗಿ ಗೋಟ ಹಾಕಿಕೊಂಡು ಬಂದು ನನ್ನ ಮುಂದೆ ನಿಂತ್ಲು. ಅವಳ ಹಿಂದೆಯೇ ನಿಂಗಿಯ ಅವ್ವ ಲ್ಯಾಂಪಿನ ಮಂದ ಬೆಳಕಿನಲ್ಲಿ ನಿಂಗಿ ಕಟೆದ ಬೊಂಬೆಯ ಹಾಗೆ ಕಾಣುತ್ತಿದ್ದಳು. ಮಳೆ ಹೊಯ್ಯುತ್ತಲೇ ಇತ್ತು. ಗವಿಗತ್ತಲಲ್ಲಿ ನಡು ನಡುವೆ ಚಳಿಂನೇ ಚಾಟಿ ಏಟಿನಂತಹ ಮಿಂಚು ಗುಡುಗು. ಮನಸ್ಸಿನಲ್ಲಿ ಅವ್ವ ಅನ್ನುತ್ತಿದ್ದಂತೆ 'ಅರ್ಜುನ ಸರ್ಜನ ಪಲ್ಗುಣ ಪಾರ್ಥ ಕಿರೀಟ ಧನಂಜಯ' ಅಂದುಕೊಂಡೆ. ಈಗಂದರೆ ಸಿಡಿಲು ಹೊಡೆಯುವುದಿಲ್ಲವೆಂಬ ಹಳ್ಳಿಯ ನಂಬಿಕೆ. ನಿಂಗಿಯ ಅವ್ವ "ಬನ್ನಿ ದೂಪಹಾಕಿ ಅವ್ವ ಅಪ್ಪರಿಗೆ ದೂಪ ಹಾಕಿ ತಪ್ಪು ನೆಪ್ಪಲ್ಲಿನುವೆ ಮಟ್ಟಿಗಾಕ್ಕಳ್ಳಿ ಅನ್ನುರಿ" ಅಂದ್ಲು. ತಡಮಾಡದೆ ಅತ್ತೆ ಮನೆಕಡೆಗೆ ಹೊರಟೆ. ಮುಂದೆ ನಿಂಗಿ ಮತ್ತು ನಿಂಗಿಯ ಅವ್ವ ನಡೆಯುತ್ತಿದ್ದರು. "ವರ್ಷಕ್ಕೊಂದು ಮಕೆ ಹಬ್ಬ ಸತ್ತವರಿಗೆ ಕೆಟ್ಟವರಿಗೆ ಎಡೆ ಹಾಕಿ ತಪ್ಪು ನೆಪ್ಪಲ್ಲವನ್ನ ಹೊಟ್ಟೆಗಾಕ್ಕಂಡಿ ಒಳ್ಳೇದು ಮಾಡ್ಲಿ ಅಂಥ ಕೇಳ್ಕಳ್ಳಿ" ಎಂದು ನಮ್ಮ ಮನೆಯಲ್ಲಿ ನಾನು ಚಿಕ್ಕ ಹುಡುಗನಾಗಿದ್ದಾಗ ಹಿರಿಯರು ಅನ್ನುತ್ತಿದ್ದುದು ನೆನಪಿಗೆ ಬಂತು.

ನಿಂಗಿ ಮನೆ ಮುಟ್ಟಿದಾಗ ನೆನೆದ ಬಟ್ಟೆಯನ್ನು ತೆಗೆದು ಹಜಾರದ ತಂತಿಯ ಮೇಲೆ ಹಾಕಿ ಎಡೆ ಹಾಕಿದ್ದ ನಡ ಹಟ್ಟಿಗೆ ಹೋದೆ. ಅವ್ವನ ಹೆಸರಿನಲ್ಲಿ ಹಾಕಿದ್ದ ಎಡೆಗೆ ಪೂಜೆ ಮಾಡುತ್ತಿದ್ದಾಗ ತಲೆ ತಿರುಗಿದಂತಾಯ್ತು. ಕಿಟ್ಟನೆ ಕಿರುಚಿಕೊಂಡೆ. ದೆವ್ವ ಪೀಡೆ ಪಿಶಾಚಿ ಗದ್ದೆಗುಮ್ಮಗಳು ಕಣ್ಣ ಮುಂದೆ ಕುಣಿದಂತಾಯ್ತು. ಪ್ರಜ್ಞೆ ತಪ್ಪಿ ನೆಲಕ್ಕೆ ಬಿದ್ದೆ. ಸ್ವಲ್ಪ ಹೊತ್ತಾದ ಮೇಲೆ ಎಚ್ಚರವಾದಾಗ ತಲೆ ಮೇಲೆ ತಣ್ಣೀರ ಬಟ್ಟೆ ಹಾಕಿದ್ದರು. ತೋಳಿಗೆ ತಾಯಿತ ಬಿಗಿದಿದ್ದರು. ನಿಂಗಿಯ ಅವ್ವ, ನಿಂಗಿ ಸುತ್ತಾಗಟ್ಟಿ ಅಳುತ್ತಿದ್ದರು. ನಾನು ಬರಿ ಕೈಸನ್ನೆ ಮಾಡಿದೆ. ಮಾತನಾಡಲು ಮಾತುಗಳು ಎಳಿದಿದ್ದವು. ಬಾಯಿಂದ ಶಬ್ದ ಹೊರ ಬರಲಿಲ್ಲ. ಸುಮ್ಮನೆ ಅವರನ್ನೆಲ್ಲ ನೋಡು ತ್ತಿದ್ದೆ. ಊರಿಗೆ ಬಂದ ವಾಂತಿ ಬೇದಿ ಅಪ್ಪನನ್ನ ಚೆಟ್ಟ ಕಟ್ಟಿಕೊಂಡು ಹೊತ್ತಿ ಕೊಂಡು ಹೋದದ್ದು, ಹಾಳು ಹೊಲದಲ್ಲಿನ ದಟ್ಟವಾದ ಬೆಳೆದ ಕಳೆ, ಅವ್ವನ ಸಾವಿಗೆ ಕಾರಣವಾದ ಭಾವ, ಅವ್ವನ ಮುಖದ ಮೇಲಿನ ರೇಖಾ ಚಿತ್ರಗಳಂತ ದಿಕ್ಕಾಪಾಲದ ರಂಗೋಲಿಯಂತಹ ಸುಕ್ಕುಗಳು, 'DEATH THE LEVELLER' ಪದ್ಯದ ಸಾಲುಗಳು, ನೈಟಿಂಗೇಲ್‌ಳ ಸ್ನೇಹದ ಗುಟ್ಟು, ನಿಂಗಿಯ ಜೊತೆಗಿನ ಮದುವೆಯ ಯೋಜನೆ...... ನೆನಪಿಗೆ ಬಂದೇ ಬರುತ್ತಿದ್ದವು. 'ಆಯ್ ಪವಿತ್ರ ಯಾಗಿದ್ದೀಯಾ ? ಏ, ನೈಟಿಂಗೇಲ್ ಚೆನ್ನಾದ್ದೀಯಾ ? ಫಾರಿನ್‌ಗೆ ಹೋದ್ಲು ಅಂದ್ರು ಮತ್ಯಾವಾಗ ಬಂದೆ ?" ಹೀಗೆ ಕನವರಿಸುತ್ತಿದ್ದೆ. "ಅವ್ವಗೆ ಬಾವು ಬಂದ್ಮೇಲೆ ನನ್ನ ಕಥಾನೂ ಮುಗಿತು ಅಂದಿದ್ದನಂತೆ ಆ ನಿಂಗಪ್ಪ ಅವ್ವನ ಕರಾರೀ" ಎಂದಾಗ "ಸುಮ್ನಿರಪ್ಪ ಯಾಕಾಂಗಾಡರೀ" ಅಂಥ ಯಾರೋ ಅಂದ್ರು. "ಗ್ಯಾಸ ಕೆಟ್ಹೋಗದೆ ಆ ಹೈದನ್ಗೆ ಪುಸ್ಕ ಓದಿ ಓದಿ ಅವ್ನ ಓದಿ ಬಿಡ್ಸಿ ಜೀತಕ್ಕೆ ಪಟೇಲ್ ಚಂದ್ರೇಗೌಡ್ರು ಮನ್ಗೆ ಕಳ್ಸಿ ಅಂದೆ ನನ್ ಮಾತು ಯಾರೂ ಕೇಳ್ಲಿಲ್ಲ" ಅಂಥ ನಗುತ್ತಿದ್ದ ನಿಂಗಪ್ಪನ ಪಾಚಿ ಕಟ್ಟಿದ್ದ ಮೂರ್ನಾಲ್ಕು ಹಲ್ಲುಗಳು ಕಾಣುತ್ತಿದ್ದೂ "ಸುಮ್ಕೆ ಯಾಕತ್ತರಿ, ಅವ್ನ ಕಥಾ ಮುಗಿತು ಕನಾ" ಅಂದು ಹೋಗುತ್ತಿದ್ದ ಅವನ ಮುಖದಲ್ಲಿ ನಗೆ ಮಾತ್ರ ತುಂಬಿ ತುಳುಕುತಿತ್ತು ●

# ದೇವರು 'ದಯಾಮಯ'

## ವೈ. ಬಿ. ಹಿಮ್ಮಡಿ

ನಮ್ಮಲ್ಲಿ ಊಟಕ್ಕೆ ಬಟ್ಟೆಗೆ ವಾಸ್ತವಕ್ಕೆ ಕೊರತೆಯಿದೆ. ಆದರೆ ದೇವರುಗಳಿಗೆ ಕೊರತೆಯಿಲ್ಲ. ನಾವು ನಂಬುವ ಈ ದೇವರುಗಳ ಕುರಿತು 'ದೇವರು ದಯಾಮಯ' 'ದುಷ್ಟ ಶಿಕ್ಷಕ ಶಿಷ್ಟ ರಕ್ಷಕ' ಇತ್ಯಾದಿ ನಂಬಿಕೆಗಳು ನಮ್ಮ ತಲೆಯ ಹೊಲದಲ್ಲಿ ಆಳವಾಗಿ ಬೇರೂರಿ ಬೆಳೆಯುತ್ತಲಿವೆ.

ನೂರಕ್ಕೆ ತೊಂಭತ್ತರಷ್ಟು ಜನ ದೇವರಿರುವನೆಂದೇ ನಂಬಿದ್ದಾರೆ. ಅದಕ್ಕೆ ಸಾಕ್ಷಿಯಾಗಿ ಅವರು ಮಠ ಮಂದಿರ ಗುಡಿ ಕಟ್ಟಿಸಿದ್ದಾರೆ; ಕಟ್ಟಿಸುತ್ತಿದ್ದಾರೆ. ಚಿನ್ನದ ಕಿರೀಟ, ಬೆಳ್ಳಿಯ ಮೀಸೆ, ರತ್ನದ ಹಾರ, ವಜ್ರದ ಕಣ್ಣು ಇತ್ಯಾದಿ ಮಾಡಿಸಿದ್ದಾರೆ. ತುಪ್ಪ, ಹಾಲು, ಮೊಸರು. ಜೇನುತುಪ್ಪ ಮುಂತಾದವುಗಳಿಂದ ಅಭಿಷೇಕ ಮಾಡುತ್ತಿದ್ದಾರೆ. ಬಯಲಲ್ಲಿರುವ ದೇವರುಗಳಿಗೆ ಡೊಂಕ ಬಾಲದ ನಾಯಕರು ಸ್ವ–ಇಚ್ಛೆಯಿಂದ ಅಭಿಷೇಕ ಮಾಡುತ್ತಾರೆ. ದೇವರುಗಳೂ ಕೂಡ ಎಷ್ಟೋ ಜನಗಳ ಮೈ ಮೇಲೆ ಬಂದು ತಮಗೆ ಬೇಕಾದುದನ್ನು ಕೇಳಿ ಪಡೆಯುತ್ತವೆ. ಅಲ್ಲದೆ ಭಕ್ತರಿಗೆ ಬೇಕಾದುದನ್ನು ಕೊಡುವ ಭರವಸೆ ಕೊಡುತ್ತವೆ, ನಮ್ಮ ರಾಜಕಾರಣಿಗಳಂತೆ. ಕಳ್ಳ ಭಕ್ತರಿದ್ದರೆ ಅವರನ್ನು ರಕ್ಷಿಸುವ ಜವಾಬ್ದಾರಿ ಹೊರುತ್ತವೆ.

ಕೆಲವು ಜೀವರಕ್ಷಕ ದೇವರುಗಳು ಕೋಣ, ಕುರಿ, ಕೋಳಿ, ಮುಂತಾದವುಗಳ ಬಲಿ ಬೇಡುತ್ತವೆ. ಕೆಲವು ದೇವ-ದೇವತೆಗಳಿಗೆ ಹರೆಯದ ಯುವತಿಯರು ಬೇಕು. ಹಾಗೇ ಕೆಲವು ದೇವರುಗಳಿಗೆ ಮಜಾ ಮಾಡಲು ಸೋಮರಸ (ಸರಾಯಿ-ಗಾಂಜಾ) ಬೇಕು, ಮತ್ತೆ ಕೆಲವು ದೇವರುಗಳಿಗೆ ತಲೆಯ ಕೂದಲಷ್ಟೇ ಬೇಕು; ಉಳಿದ ಕೂದಲು ಬೇಡ. ಅವುಗಳ ಬೇಕುಗಳಿಗೆ ಕೊನೆಯೇ ಇಲ್ಲ; ಆದರೆ ಅವು ನಮಗೆ ಏನನ್ನೂ ಕೊಡುವುದಿಲ್ಲ. ಯಾಕೆಂದರೆ ನಾವು ಜೀವಂತವಾಗಿರುವುದಕ್ಕೆ ಸಾಕ್ಷಿಯಾಗಿದ್ದೇವೆ, ಅದಕ್ಕೇ ನಾವು ಕೊಡುತ್ತೇವೆ. ಅವು ಇಲ್ಲವೇ ಇಲ್ಲ ಕೊಡುವುದಿಲ್ಲ. ದೇವರುಗಳಿವೆ ಎನ್ನುವುದು ನಮ್ಮ ಭ್ರಮೆ ಮಾತ್ರ.

ದೇವರಿಲ್ಲ ಎಂವರೆ ಕೆಲವರಿಗೆ, ಕೆಲವರಿಗೆ ಏನು ! ತೊಂಬತ್ತರಷ್ಟು ಜನರಿಗೆ ಇದ್ದಾನೆಂದೇ ನಂಬಿಕೆ. ಅಲ್ಲದೆ ಆ ದೇವರು "ದಯಾಮಯ" ಮತ್ತು 'ದುಷ್ಟ ಶಿಕ್ಷಕ ಶಿಷ್ಟ ರಕ್ಷಕ' ಎಂದೇ ಅಚಲವಾಗಿ ನಂಬಿದ್ದಾರೆ. ಹಾಗಾವರೆ ಆ ನಂಬಿಕೆಯನ್ನು ಸ್ವಲ್ಪ ಪರಿಶೀಲಿಸೋಣ.

**'ದೇವರು ದಯಾಮಯ ಅಥವಾ ಕರುಣಾಶಾಲಿ':** ಈಗಿನ ಮಾಜಿ ಮುಖ್ಯಮಂತಿ ಕವಿ ಸಿನೀಮಾ ನಟ ರಾಮಕೃಷ್ಣ ಹೆಗಡೆಯವರು ಕರ್ನಾಟಕದ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡಾಗ ಆ ಸಂದರ್ಭದಲ್ಲಿ ಅಪಘಾತವೊಂದರಲ್ಲಿ ಸತ್ತ ವಾಹನ ಚಾಲಕನ ಗರ್ಭಿಣಿ ಹೆಂಡತಿ ತನ್ನ ಅವಸ್ಥೆ ತೋಡಿಕೊಂಡಾಗ, ಅವರ ಮನಸ್ಸು ಕರಗಿ ಕಣ್ಣೀರಾಯಿತಂತೆ. ಇದನ್ನು ಕಂಡ ಹೆಗಡೆಯವರು ಬಡ ಹೆಣ್ಣು ಮಕ್ಕಳಿಗೆ ಹೆರಿಗೆ ಭತ್ಯ ಕೊಡಲು ತಮ್ಮ ಸರಕಾರದಿಂದ ಸುರು ಮಾಡಿದರು. ದೇವರುಗಳಿಗಾದರೂ ಇಷ್ಟಾದರೂ ಕನಿಕರ ಇರಬೇಡವೇ ? ರಾಜಸ್ಥಾನದ ಸುಂದರ ಯುವತಿ ರೂಪಾಕನ್ವರ್ ಆಕೆಯ ಗಂಡ ಸತ್ತಾಗ ಗಂಡನ ಚಿತೆಯಲ್ಲಿ ಆಕೆಯನ್ನು ಬಲವಂತವಾಗಿ ಸುಟ್ಟರು. ಇದನ್ನು ಕೇಳಿದ, ಓದಿದ ದೂರದಲ್ಲಿರುವ ನಮ್ಮಂಥವರ ಕರುಳೂ ಚುರುಕ್ ಎಂದಿತು. ಆದರೆ ಜಗತ್ತಿನ ತುಂಬಾ ಕಣ್ಣಾಗಿದ್ದುಕೊಂಡು ಸಾಕ್ಷಾತ್ 20 ಎಂ. ಎಂ. ಸಿನೀಮಾ ನೋಡುವಂತೆ ಪ್ರತ್ಯಕ್ಷ ನೋಡಿದ ಆ ಕರುಣಾಮಯಿ ದೇವರಿಗೆ ಸ್ವಲ್ಪವೂ ಕನಿಕರ ಬರಲಿಲ್ಲವೆ ? ಕರುಣೆ ಹುಟ್ಟಲಿಲ್ಲವೇ ? ದಯೆ ಉರಿದು ಹೋಗಿತ್ತೆ ಆ ದೇವರಿಗೆ ? ದಯೆ ತೋರಿ ಉಳಿಸಬೇಕಾಗಿತ್ತಲ್ಲ !

ಹೋಗಲಿ ಈಗ (ಯಾವಾಗಲೂ) ದೇಶದ ತುಂಬ ಬರಗಾಲದ ಛಾಯೆ. ಮಳೆಯಿಲ್ಲದೆ ಜನ ಬರಗಾಲದಿಂದ ಕರುಬಿ ಕರುಬಿ ಸಾಯುತ್ತಿದ್ದಾರೆ. ನಮ್ಮ ಹಿಂದೂ ಜನಗಳ ನಂಬಿಕೆಯಂತೆ ಚೆತ್ತೀಸ್ (೩೬) ಕೋಟಿ ದೇವರುಗಳಿದ್ದಾರೆ. ಒಬ್ಬನೇ ದೇವರು ಬೇಡ, ಈ ಎಲ್ಲ ಮೂವತ್ತಾರು ಕೋಟಿ ದೇವರುಗಳು ಮಾತಾಡಿಕೊಂಡು ಈ ಜನರ ಕಷ್ಟ ಪರಿಹಾರಕ್ಕಾಗಿ ತಿನ್ನುವ ಕಾಳಿನ ಮಳೆಯನ್ನಾದರೂ ಸುರಿಸಬಾರದೇ ? ಬಹುಶಃ ಇಲ್ಲಿರುವ ಜನಗಳಲ್ಲಿ ಕೆಲವರು ದುಷ್ಟರಿರುವರೆಂದು ಕಾಳಿನ ಮಳೆ ಸುರಿಸಲಿಕ್ಕಿಲ್ಲ. ಆದರೆ ದುಷ್ಟರಿಗಿಂತ ಶಿಷ್ಟ ಜನರೇ ತುಂಬಿರುವಾಗ ಕೆಲವೇ ಜನ ದುಷ್ಟರ ಸಲುವಾಗಿ ಕಾಳಿನ ಮಳೆ ಸುರಿಸುವುದಿಲ್ಲವೆಂದರೆ ಏನರ್ಥ ! ದೇವರು ಒಳ್ಳೆಯವರಿಗೆ ಅನ್ಯಾಯ ಮಾಡಿದಂತಲ್ಲವೆ ? ಅಥವಾ ದೇವರು ತಾನೇ ದುಷ್ಟನಾದಂತಲ್ಲವೆ ?

ಈ ಮೇಲಿನ ಮಾತೂ ಬದಿಗಿರಲಿ. ದೇವರು ದಯಾಮಯನಾದರೆ ಎಲ್ಲ ಜನರನ್ನು ಒಂದೇ ತೆರನಾಗಿ, ಸುಖವಾಗಿ, ಚೆಲುವು, ಯೌವನ ಕೊಟ್ಟಿರಬೇಕಾಗಿತ್ತಲ್ಲ ! ಕುರುಡು, ಕುಂಟ, ಮೂಗ, ಕಿವುಡ, ಕರಿಯ ಇತ್ಯಾದಿಯಾಗಿ ಯಾಕೆ

ಮಾಡಬೇಕು? ಬಹುಶಃ ಅವರು ಮಾಡಿದ ಪಾಪಕ್ಕನುಗುಣವಾಗಿ ಅವರನ್ನು ಆ ರೀತಿ ಮಾಡಿದ್ದಾನೆನ್ನುವುದಾದರೆ ಅಂಥ ಪಾಪ ಮಾಡುವ ಅಯೋಗ್ಯರನ್ನೇಕೆ ಮೊದಲು ಸೃಷ್ಟಿಸಬೇಕಿತ್ತು? ಅಥವಾ 'ಮೊದಲು ದೇವರು ಒಳ್ಳೆಯವರನ್ನೇ ಸೃಷ್ಟಿಸಿದ್ದ ಆ ಮೇಲೆ ಕಾಲಾನಂತರ ಮುಂದೆ ಅವರೇ ಕೆಟ್ಟವರಾದರು' ಎನ್ನುವುದಾದರೆ ಮನುಷ್ಯನನ್ನ ನಿರ್ಮಾಣ ಮಾಡಿದ ದೇವರು ಅವನು ಮುಂದೆ ಮಾಡ ಬಹುದಾದ ಚಟುವಟಿಕೆಗಳನ್ನು ತಿಳಿದಿರಲಿಲ್ಲವೆ? ಮೊದಲ ಜನ್ಮದಲ್ಲಿ ಮಾಡಿದ ಪಾಪಕ್ಕೆ ಈ ಶಿಕ್ಷೆಗಳನ್ನು ಕೊಟ್ಟಿದ್ದಾನೆ ಎನ್ನುವುದಾದರೆ ಮೊದಲ ಜನ್ಮದಲ್ಲಿ ಪಾಪ ಮಾಡದಿರಲು ದೇವರು ಅಂಥವರಿಗೇಕೆ ಒಳ್ಳೆಯ ಬುದ್ಧಿ ಕೊಡಲಿಲ್ಲ? ದೇವರಿದ್ದರೆ, ಅವನ ತಪ್ಪಲ್ಲವೆ?

ಕೆಲವು ಜನಗಳ ಪ್ರಕಾರ ದೇವರು ಒಳ್ಳೆಯದನ್ನು ಮಾಡುವ ಹಾಗೆ (ಯಾವುದು ಒಳ್ಳೆಯದೋ ಗೊತ್ತಿಲ್ಲ) ಭಕ್ತರನ್ನು ಕಾಡಿಸುತ್ತಾನೆ, ಪೀಡಿಸುತ್ತಾನೆ. ಹೌದಾದರೆ ನಮ್ಮಲ್ಲಿ ಒಳ್ಳೆಯವರನ್ನು ಕಾಡಿಸುವ ಕೆಲವು ಜಮೀನ್ದಾರರಿದ್ದಾರೆ ಗೂಂಡಾ ಗಳಿದ್ದಾರೆ ಪೋಲಿಸರಿದ್ದಾರೆ; ಇಂಥವರಿಗೆ ಜನ ಛಿ, ಥೂ ಎಂದು ಉಗಿದು ಲಟಿಕೆ ಮುರಿಯುತ್ತಾರೆ. ಬೇವಾರ್ಸಿಗಳು ದುಷ್ಟರು ಇತ್ಯಾದಿ ಉಪನಾಮಗಳಿಂದ ಕರೆಯುತ್ತಾರೆ, ದೇವರಾದವನೂ ಒಳ್ಳೆಯವರನ್ನು ಕಾಡಿಸುತ್ತಾನೆಂದರೆ ಈ ದುಷ್ಟರಿ ಗಿಂತ ಮಹಾದುಷ್ಟನಾದಂತಲ್ಲವೇ? ಇಂಥವರಿಗೆ ದೇವರು ಎನ್ನಬಹುದೆ? ಹೀಗೆ ವಿಚಾರ ಮಾಡಿದರೆ ದೇವರು ದಯಾಮಯನೂ ಅಲ್ಲ ಕರುಣಾಮಯನೂ ಅಲ್ಲ. ಅವನು ಇಲ್ಲವೇ ಇಲ್ಲ. (ಯಾಕೆಂದರೆ) ೨೦-೮-೯೧ ರಂದು ಉತ್ತರ ಪ್ರದೇಶದ ಗೇರವಾಲಾದಲ್ಲಿ ಭೂಕಂಪ ಸಂಭವಿಸಿ ಹದಿನೈದು ನೂರು ಜನ ಸತ್ತಾಗ ಯಾವ ದೇವರೂ ಬಂದು ಅವರನ್ನು ಉಳಿಸಲಿಲ್ಲ.

**'ದುಷ್ಟ ಶಿಕ್ಷಕ ಶಿಷ್ಟ ರಕ್ಷಕ' :** ಇನ್ನೂ ಮುಂದುವರಿದು ಭಾವುಕರ ನಂಬಿಗೆ ಯಂತೆ ದೇವರಿದ್ದಾನೆಂದೇ ಇಟ್ಟುಕೊಂಡು ಈ ಮೇಲಿನ ಮಾತನ್ನೂ ಸ್ವಲ್ಪ ವಿವೇಚಿಸೋಣ. ದೇವರು ದುಷ್ಟ ಶಿಕ್ಷಕ ಶಿಷ್ಟ ರಕ್ಷಕನೆಂದೇ ನಂಬಿಕೊಂಡು ನಮ್ಮ ಇತಿಹಾಸದ ಇಂದಿನ ದಿನಮಾನಗಳಿಗೆ ಬಂದು ನೋಡೋಣ. ನಮ್ಮ ದೇಶದಲ್ಲೀಗ ಅಶಾಂತಿ ಹಿಂಸೆ ತಾಂಡವವಾಡುತ್ತಿದೆ. ಬಂದೂಕು ಗನ್-ಬಾಂಬ್ ಹೊಗೆಯಾಡು ತ್ತಿವೆ. ಚಾಕು ಚೂರಿ ಖಡ್ಗ ಥಳಥಳಿಸುತ್ತಿವೆ. ಪಂಜಾಬ್-ಕಾಶ್ಮೀರ್ ಹೊತ್ತಿ ಉರಿಯುತ್ತಿವೆ. ಆಸ್ಸಾಂ ಜ್ವಾಲಾರಸದಂತೆ ಕುದಿಯುತ್ತಿದೆ. ತಮಿಳು ಉಗ್ರಗಾಮಿ ಗಳು, ಆಂಧ್ರದ ನಕ್ಸಲೀಯರು (ಇವರ ಧ್ಯೇಯ-ಧೋರಣೆಗಳ ಕುರಿತು ಭಿನ್ನಾಭಿ ಪ್ರಾಯಗಳಿವೆ) ಕಾಶ್ಮೀರದ ಉಗ್ರಗಾಮಿಗಳು, ರಾಮಜನ್ಮಭೂಮಿ-ಬಾಬ್ರಿ ಮಸೀದಿಯ ಕೋಮುವಾದಿಗಳು, ದುಡಿವ ಮಣ್ಣಿನ ಮಕ್ಕಳಿಗೆ ಉಚ್ಚಿ ಕುಡಿಸುವ

ಹೇಲು ತಿನ್ನಿಸುವ ಜಾತ್ಯಂಧರು, ಮಹಿಳೆಯರ ಮೇಲೆ ಅತ್ಯಾಚಾರ ಮಾಡುವ ಚಿಮಣಿ ಎಣ್ಣೆ ಗೊಜ್ಜಿ ಸುಡುವ ಕ್ರೂರಿ ಹೃದಯಿಗಳು–ಇವರೆಲ್ಲ ದುಷ್ಟರು ತಾನೆ ? ಬೆಲ್ಚಿ, ಹಿಪ್ರಾ, ಚಂಡೂರು, ಸಂಗನಕಲ್ಲುವಿನಂಥ ಸಾಮೂಹಿಕ ಹತ್ಯಾಕಾಂಡ ಗಳನ್ನು ಕುದರೆಮೋತಿ-ಕಲಕೇರಿಗಳಂಥ ಬೆತ್ತಲೆ ಮೆರವಣಿಗೆ ಅತ್ಯಾಚಾರಗಳನ್ನು ಕಣ್ಣಿಂದ ನೋಡಿ ದುಷ್ಟರಿಗೆ ತಪ್ಪಿತಸ್ಥರಿಗೆ ಶಿಕ್ಷೆ ಕೊಡದೆ ಸುಮ್ಮನಿರುವುದು ದೇವರೆ? ದೇವರು ನೋಡಿಯೂ ನೋಡದಂತೆ ಇರುವಷ್ಟು ಕ್ರೂರಿಯೇ ? ಬಂದು ದುಷ್ಟರನ್ನು ಶಿಕ್ಷಿಸದಷ್ಟು ಹೇಡಿಯೇ ? ಇಲ್ಲಿ ಅಮಾಯಕರಿಗೆ ಶೋಷಣೆಯಾಗಿದೆ. ಅನ್ಯಾಯವಾಗಿದೆ ದೇವರಿದ್ದರೆ ರಕ್ಷಿಸಲಿಲ್ಲವೇಕೆ ? 'ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ...... ' ಎಂದು ಹೇಳಿದವನು ಗ್ಲಾನಿ ತುಂಬಿ ತುಳುಕಿರುವಾಗ ಎಲ್ಲಿ ಮರೆಯಾಗಿ ಮಲಗಿದ್ದಾನೆ ? ನಿಜವಾಗಿಯೂ ಇರುವುದೇ ಖಾತ್ರಿಯಾದರೆ ಬರಬಾರದೇಕೆ ? ರಕ್ಷಿಸಬಾರದೇಕೆ ?

ಹೋಗಲಿ. ೧೯೪೭ ರಲ್ಲಿ ರಾಷ್ಟ್ರಪಿತ ಮಹಾತ್ಮಾಗಾಂಧಿ, ೧೯೮೪ ರಲ್ಲಿ ನಮ್ಮ ಭಾರತದ ಅಂದಿನ ಪ್ರಧಾನಿ ಇಂದಿರಾಗಾಂಧಿ ಮತ್ತು ೧೯೯೧ ರಲ್ಲಿ ಅಂದಿನ ಮಾಜಿ ಪ್ರಧಾನಿ ರಾಜೀವಗಾಂಧಿ–ಇವರುಗಳ ಭೀಕರ ಹತ್ಯೆಗಳಾದವು. ಹತ್ಯೆ ಮಾಡಿದವರು ಅತಿ ದುಷ್ಟರಲ್ಲದೆ ? ಯಾಕೆ ದೇವರು ಈ ಹಂತಕರಿಗೆ ಶಿಕ್ಷೆ ಕೊಡಲಿಲ್ಲ ? ಅದಕ್ಕೂ ಪೂರ್ವ ಈ ಮೂವರೂ ಗಾಂಧಿಗಳನ್ನು ರಕ್ಷಿಸಲಿಲ್ಲವೇಕೆ ? ಗೋಡ್ಸೆ, ಸಿಂಗ್‌ರಿಗೆ ಶಿಕ್ಷೆ ಕೊಡಿಸಿದ್ದು ನ್ಯಾಯಾಲಯ, ನಳಿನಿ ಸತ್ತಿದ್ದು ಸ್ವಯತ್ನದಿಂದ, ಶುಭಾ—ಶಿವರಾಸನ್ ಸತ್ತದ್ದು ಸ್ವಪ್ರಯತ್ನದಿಂದ, ಅಂದರೆ ದೇವರು ಇವರನ್ನು ಶಿಕ್ಷಿಸಲಿಲ್ಲ. ಮಹಾತ್ಮಾ ಗಾಂಧಿ, ಇಂದಿರಾಗಾಂಧಿ ಮತ್ತು ರಾಜೀವ ಗಾಂಧಿ ಈ ಮೂವರೂ ಗಾಂಧಿ ಯವರನ್ನು (ಸಂಜಯಗಾಂಧಿಯನ್ನು ಲೆಕ್ಕಕ್ಕೆ ಹಿಡಿದಿಲ್ಲ) ದೇವರು ರಕ್ಷಿಸಬೇಕಾಗಿ ತ್ತಲ್ಲ! ಯಾಕೆಂದರೆ ಈ ಮೂವರೂ ಒಳ್ಳೆಯವರೆಂದೇ ನಾವೆಲ್ಲ ಭಾರತೀಯರು ನಂಬಿದ್ದೇವೆ. ಅಲ್ಲದೆ ಅವರ ಒಳ್ಳೆಯತನಕ್ಕೆ ಸಾಕ್ಷಿಯಾಗಿ ಅವರ ಜಯಂತಿಗಳನ್ನು ಆಚರಿಸುತ್ತೇವೆ. ಫೋಟೋಗಳನ್ನಿಟ್ಟು ಅಲಂಕರಿಸುತ್ತೇವೆ. ಮನೆ, ತೋಟ, ರಸ್ತೆ, ಶಾಲೆ ಕಾಲೇಜುಗಳಿಗೆ ಅವರುಗಳ ಹೆಸರುಗಳನ್ನಿಟ್ಟಿದ್ದೇವೆ. ನಿಧಿ ಸಂಗ್ರಹ ಸ್ಥಾಪಿಸಿ ದ್ದೇವೆ. ಅವರ ಪುತ್ಥಳಿಗಳನ್ನು ಬೇಕ–ಬೇಕಾದಲ್ಲಿ ಅನಾವರಣ ಮಾಡಿದ್ದೇವೆ. ಅವರ ಸ್ಮಾರಕ ಕಟ್ಟಿಸಿದ್ದೇವೆ. ಹೀಗೆಲ್ಲ ನಾವು ಮಾಡಬೇಕಾದರೆ ಅವರೆಲ್ಲ ಒಳ್ಳೆಯವರು ತಾನೇ ? ಅಂದ ಮೇಲೆ ಈ ಮೂವರೂ ವ್ಯಕ್ತಿಗಳನ್ನು (ಶಿಷ್ಟರನ್ನು) ದೇವರು ರಕ್ಷಿಸಬೇಕಾಗಿತ್ತಲ್ಲ! ಯಾಕೆಂದರೆ ರಕ್ಷಕನಾದ ದೇವರಿಲ್ಲ ಎಂದು ನಾವು ಹೇಳಲು ತಯಾರಿಲ್ಲ. 'ದುಷ್ಟ ಶಿಕ್ಷಕ ಶಿಷ್ಟ ರಕ್ಷಕ' ದೇವರಿದ್ದೂ ಇವರನ್ನು ರಕ್ಷಿಸ ಲಿಲ್ಲವೆಂದರೆ ಹತ್ಯೆಗೊಳಗಾದ ಈ ಮೂವರೂ ದೇವರ ದೃಷ್ಟಿಯಲ್ಲಿ ದುಷ್ಟರೇ

ಇರಬೇಕು. ಇವರು ಸತ್ತರೆ ಶಿಷ್ಟರಿಗೆ ಯಾವ ತೊಂದರೆ ಇರಲಾರದು ಎಂದು ದೇವರು ಬಯಸಿರಬೇಕು. ಹಾಗೆಂದಾಗ ಈ ಮೂವರೂ ಗಾಂಧಿಗಳು ದುಷ್ಟರೇ ಸರಿ. ಇಂಥವರ ಜಯಂತಿ ಆಚರಿಸುವ ಮನೆಗಳಲ್ಲಿ ಫೋಟೋಗಳನ್ನಿಟ್ಟಿರುವ ಇವರ ಹೆಸರಲ್ಲಿ ಶಾಲಾಕಾಲೇಜು ತೆರೆದಿರುವ ಜನರೆಲ್ಲ ಮರಿ ದುಷ್ಟರೇ. ಅದೇ ರೀತಿಯಲ್ಲಿ ಹೋದವರ್ಷ (೧೯೯೧) ಕೊಲ್ಲಿಯುದ್ಧ ನಡೆದಾಗ ಅರ್ಧ ಜಗತ್ತನ್ನೇ ಎದುರುಹಾಕಿ ಕೊಂಡು ಎಷ್ಟೋ ಜನರ ಸರ್ವನಾಶಕ್ಕೆ ಕಾರಣನಾದ ಸದ್ದಾಂ ಹುಸೇನ ದೇವರ ಅವತಾರ; ಸತ್ತವರೆಲ್ಲ ದುಷ್ಟರು ಎಂದಾಯಿತು.

ನಾನು 'ದುಷ್ಟ ಶಿಕ್ಷಕ ಶಿಷ್ಟ ರಕ್ಷಕ' ದೇವರಿಲ್ಲವೆನ್ನುತ್ತೇನೆ. ಈ ಮೂವರೂ ಗಾಂಧಿಗಳನ್ನು ಕೊಂದವರು ಮಹಾದುಷ್ಟರು ಮತ್ತು ಈ ಮೂವರೂ ಗಾಂಧಿಗಳು ಒಳ್ಳೆಯವರೆಂದೇ (ಹೆಚ್ಚು ಕಡಿಮೆ) ನಂಬಿದ್ದೇನೆ. ಹಾಗೆಯೇ ಹೇಳುತ್ತೇನೆ. ನೀವು ಇಂಥ ದೇವರು ಅಥವಾ ದೇವರುಗಳು ಇವೆ ಎನ್ನುವುದಾದರೆ ಖಂಡಿತ ವಾಗಿಯೂ ಭೀಕರ ಹತ್ಯೆಗೊಳಗಾದ ಈ ಮೂವರು ಗಾಂಧಿಗಳು ಮಹಾ ದುಷ್ಟ ರಾಗುತ್ತಾರೆ. ಯಾಕೆಂದರೆ ದೇವರಿದ್ದಾನೆಂದು ನೀವು ಗಟ್ಟಿಯಾಗಿ ಘಂಟಾಘೋಷ ವಾಗಿ ಹೇಳುತ್ತೀರಿ. ಆ ದೇವರು ಇರುವಾಗ ಅವನ/ರ ಮುಂದೆ ಈ ತರಹದ ಹತ್ಯೆಯಾಯಿತೆಂದರೆ ದೇವರು ರಕ್ಷಿಸಲಿಲ್ಲವೆಂದರ್ಥ. ಯಾಕೆ ರಕ್ಷಿಸಲಿಲ್ಲವೆಂದರೆ ಅವರು ದುಷ್ಟರಿದ್ದರು. ಶಿಕ್ಷೆಗೊಳಗಾದರು ಎಂದರ್ಥ. 'ದುಷ್ಟ ಶಿಕ್ಷಕ ಶಿಷ್ಟ ರಕ್ಷಕ' ದೇವರಿದ್ದಾನೆಂದು ರಾರಾರೋಷವಾಗಿ ಹೇಳುವ ನೀವು ನಿಮ್ಮ ದೇವರು ಶಿಕ್ಷಿಸಿದ ಮಹಾತ್ಮಾಗಾಂಧಿ ಇಂದಿರಾಗಾಂಧಿ ಮತ್ತು ರಾಜೀವಗಾಂಧಿ ದುಷ್ಟರೆಂದು ಬಾಯಿ ಬಿಚ್ಚಿ ದನಿಯೆತ್ತಿ ಎಲ್ಲೆಲ್ಲೂ ಎಲ್ಲರಿಗೂ ಹೇಳಲೇಬೇಕು. ಇಲ್ಲದಿದ್ದರೆ ಮೂವರೂ ಗಾಂಧಿಗಳು ಒಳ್ಳೆಯವರು 'ದುಷ್ಟ ಶಿಕ್ಷಕ ಶಿಷ್ಟ ರಕ್ಷಕ' ನೆಂಬ ದೇವರು ಇಲ್ಲ. ಆದ್ದರಿಂದ ಅವರು ದುಷ್ಟರಿಂದ ಹತ್ಯೆಗೊಳಗಾದರು. ಎಂದಾದರೂ ಹೇಳಬೇಕು. ಎರಡರಲ್ಲಿ ಒಂದು ಆಯ್ಕೆ ಮಾಡಲೇಬೇಕು. ದೇವರಿದ್ದಾನೆಂದರೆ ಗಾಂಧಿಗಳು ದುಷ್ಟರು. ಗಾಂಧಿಗಳು ಒಳ್ಳೆಯವರೆಂದರೆ ಆ ಥರದ ದೇವರು ಇಲ್ಲವೇ ಇಲ್ಲ. ●

## ಎಂ. ಬಿ. ಅಡ್ನೂರ

# ಸಂವಾದ

ಬಗಲಲ್ಲೊಂದು ಕೂಸು, ಬದಿಯಲ್ಲೊಂದು
ಹೋಲ್ಡಾಲು, ಆಕೆ ಗಕ್ಕನೆ ನಿಂತಳು
ಗದ್ದಲದ ಗಜಿ ಬಿಜಿಯು ನಡುವೆ
ನಾಲ್ಕೂ ಕಣ್ಣುಗಳು ದಿಟ್ಟಿಸಿದವು

"ಹೌದು ಅವಳು ಅವಳೇ"
"ಹೌದು, ಅವನು ಅವನೇ"

ಮಾತು ಮೌನವಾಯಿತು
ಮೌನ ಮಾತಾಡತೊಡಗಿತು
ನಿಬಿಡ ಕಾಡೊಳಗೆ
ಹೊಕ್ಕಾಡಿತು ನೆನಪು
ಮರ—ಗಿಡ—ಬಳ್ಳಿ—ತರಗೆಲೆ
ಕಿಸಕ್ಕನೆ ನಕ್ಕವು

ಮರು ಮಾತಾಡುವ ಗವಿಯು
ಆಳದ ಬಾವಿ ನೀರು
ಮಿಣುಕುವಂತೆ ನೆನಪುಗಳ
ಲ್ಯಾವಿ ಗಂಟು ಬಿಚ್ಚಿತು

ಚೆಲ್ಲು ಚೆಲ್ಲಾದ ಕನಸ
ಗೂಡಿನ ಮರಿಹಕ್ಕಿ ಅವಳಲ್ಲ
ಮಳೆ ಗಾಳಿ ಬಿಸಿಲು ಚಳಿಯು
ಬಯಲ ಬಾನಲ್ಲಿ ತೇಲುವ
ಹೆಣ್ಣು—ಹೆಂಡತಿ— ತಾಯಿ,

ಯಾರೋ ಕಡ್ಡಿಗೀರಿದ ನೆಪಕ್ಕೆ
ಬುರು ಬರು ಹೊತ್ತುರಿವ
ಬರಡು ಬೆಟ್ಟದ ಬೇಗೆ
ಮೂರು ದಿನ ಲೆಕ್ಕಕ್ಕೆ ಬಾರದ ಬೂದಿ.

ಮೌನ ಮಾತಾಡುತ್ತಲೇ ಇತ್ತು
ಮುಗುಳು ನಗೆಯು ಸೆಳಕೊಂದು
ಮಿಂಚಿ ಮಾಯವಾಯಿತು……

ಮತ್ತೆ ಅವ ಅತ್ತ ಈಕೆ ಇತ್ತ
ಗದ್ದಲ ಗಜಬಿಜಿಯಲ್ಲಿ ಕರಗಿದರು

ಅಮರೇಶ ಕುಂಬಾರ

---

## ನಮ್ಮೂರ ಕಪ್ಪು ನದಿ ಮತ್ತು ಅರಣ್ಯ

ನನ್ನ ನಿನ್ನೆಗಳ ಹಾಗೆ, ನಿನ್ನ ದನಿ
ಒಳದನಿಯ ಹಾಗೆ ಕೊಯ್ದು ಬಿಟ್ಟಿದ್ದೀಯ.
ಹೊಳೆ ಹಾಗೆ ಹರಿದು ಬಂದೆ ನಾನು ನಿನ್ನೆಡೆಗೆ.
ಬಂದು ಸೇರುವಾಗ
ಏನೂ ಇರಲಿಲ್ಲ, ಹುಟ್ಟು ಮರುಹುಟ್ಟು ಎಳೆತನ ಮುಪ್ಪು
ಏನೂ ಇರಲಿಲ್ಲ. ನಿನ್ನ ಮುಖ
ಈಗ ತಾನೆ ಇದ್ದಂತೆ ಕಂಡದ್ದು ಈಗಿಲ್ಲ.

ನಾನೊಬ್ಬಳೆ ಇದ್ದೆ ವಿಶ್ವವ್ಯಾಪಿ
ಜೊತೆ ಜೊತೆಗೆ ಈ ಕಲ್ಲು ಗುಡ್ಡ ಹಸಿರು ವನ
ಈಗಿಲ್ಲದಾಗಿದೆ ಉಸಿರಿಗೆ ಹಸಿರು
ದಟ್ಟ ಬೆಟ್ಟ ಗುಡ್ಡಗಳ
ಹಸಿರು ಬನದ ನಡುವೆ.

ಈ ವಿಶಾಲ ಜಗದಲ್ಲಿ ಇರುವುದು ಮನುಷ್ಯನ ಜೊತೆ
ಪ್ರಾಣಿಗಳಿದ್ದವು, ಪಕ್ಷಿಗಳಿದ್ದವು, ಹೂವುಗಳಿದ್ದವು
ಕಾಡುತುಂಬ ಹಸಿರು ಹೊನ್ನಿತ್ತು.

ತಂದು ಎಸೆದಿದ್ದಾರೆ ಸುಂದರ ಹಕ್ಕಿಗಳ ರೆಕ್ಕೆಗಳನ್ನು
ಹರಿದು ಚೆಲ್ಲಿದ್ದಾರೆ ಮೂಕ ಜೀವಿಗಳ ಮೈಯನ್ನು
ಛಿದ್ರ ವಿಚ್ಛಿದ್ರವಾಗಿ ಕಾಡಿನ ಸೊಂಪು ಮೈಯೆಲ್ಲ–
ತಾರುಣ್ಯ ಭಗ್ನ ಬಂಡೆಗಳ ಮೇಲೆ, ಎದೆಗೆ ಎದೆ
ಗಾಳಿಯ ಎದುರು
ಹಸಿರು ಕ್ಷಣಗಳನ್ನು ತಿಕ್ಕಿ ಹಾಕುತ್ತಾ
ತಂದರು ನನ್ನ ಬದುಕನ್ನು ಇಲ್ಲಿಯವರೆಗೆ
ಸುರುಳಿ ಸುತ್ತಿ ಭ್ರಮಿಸುವ
ನೆಲಕ್ಕೆ ಅಟ್ಟಿಕೊಂಡೆ ಇರುವ
ತಾಳ್ಮೆಯಿಲ್ಲ ದಡಿಗಳ ಕೆಳಗೆ ಭಾರೀ
ಗಟ್ಟಿ ನೆಲ ಬಂಡೆಗಲ್ಲು
ಹಸಿರಿಲ್ಲದ ಬಿಸಿಯುಸಿರು

ಸ್ವಚ್ಛಂದ ನೀರಿನ ನಡುವೆ ಏಳು ಸೆಳವುಗಳ
ಈ ನದಿಯ ತುಂಬ ಆಳವನ್ನು ಕಟ್ಟಿ ಒಡ್ಡು ಹಾಕಿ
ಕಾಡುಗಳನ್ನು ಹೀರಿ ಹಾಕಿದ್ದಾರೆ ಬೇಗೆಯ ಒಡಲಲ್ಲಿ
ಒಣಗಿ ಹೋಗಿದೆ ಎಲ್ಲ ನದಿ ದಡಗಳು

ಬರೆದುಕೊಳ್ಳುತ್ತವೆ ಎಲ್ಲ ಬದುಕುಗಳು ತಮ್ಮ ಕಥೆಯನ್ನು
ಗಾಳಿಯ ಮೇಲೆ ಬೆಳದಿಂಗಳಿರುಳಿನಿಂದ
ಹರಿಯುತ್ತದೆ ಹಗಲು ನೆತ್ತರು
ಈ ಕಣಿವೆ ಕತ್ತಲಲ್ಲಿ
ನೆನಪುಗಳು ಹಿಂದೆ ಹಿಂದೆ
ನಿನ್ನ ಉರಿ ಕಾರುವ ದೇಹದ ಅರುಣರಾಗ
ಶೋಕ ಸಂದೇಶಗಳ ಕಥೆಯು.

# ರಾಮು ನಮಗ ಆದರ್ಶ

ರಾಮು ನಮಗೆ ಆದರ್ಶ
ಸತಿ ಪದ್ಧತಿಯನ್ನು
ಇನ್ನೂ ಜೀವಂತ
ವಾಗಿರಿಸಿಕೊಂಡಿದ್ದೇವೆ
ಮರೆಯಲ್ಲಿ ನಿಂತು
ವಾಲಿಯಂಥವರನ್ನು
ಕೊಲ್ಲುವುದ ಕಲಿತಿದ್ದೇವೆ

ರಾಮು ನಮಗೆ ಆದರ್ಶ
ಪಾದರಕ್ಷೆಗಳ ಪೂಜಿಸುವುದನ್ನು
ಮುಂದುವರಿಸಿಕೊಂಡು
ಹೊರಟಿದ್ದೇವೆ.
ಮಾಡಿಕೊಂಡ
ಹೆಂಡಂದಿರನ್ನು
ಮಂದಿ ಮಾತು ಕೇಳಿ
ಬಿಡುತ್ತಿದ್ದೇವೆ.
ರಾಮು ನನಗೆ ಆದರ್ಶ
ಧರ್ಮದ ಹೆಸರಿನಲ್ಲಿ
ಶಂಭೂಕರನ್ನು
ವಧೆ ಮಾಡುತ್ತಿದ್ದೇವೆ
ನೆತ್ತರಿನಲ್ಲಿ ನೆನೆದ
ಇಟ್ಟಿಗೆಗಳಿಂದ
ಅವನಿಗೊಂದು
ಗುಡಿಯ ಕಟ್ಟುತ್ತಿದ್ದೇವೆ.
ಪಾಪ, ನ್ಯಾಯವಾದಿ ರಾಮು
ಅವನ ಮರೆತು ಬದುಕುವದೆಂತು ?

ಗಣಪತಿ ದಿವಾಣ

## ಸಾಲ ಮಣ್ಣಾಗಿದೆ

ಮಣ್ಣಾಗಿದೆ ಸಾಲ
ಪೂರ್ಣ ಮಣ್ಣಾಗಿದೆ,
ಮಕ್ಕಳಿಗೆ–
ಹೆತ್ತವರ ಸಾಲ
ಶಿಷ್ಯರಿಗೆ–
ಗುರುಗಳ ಸಾಲ,
ಓಟು ಗಿಟ್ಟಿಸಿಕೊಂಡವರಿಗೆ–
ಕೊಟ್ಟವರ ಸಾಲ
ಅನ್ನ ಉಂಡವರಿಗೆ-
ಉಣಿಸಿದವರ ಸಾಲ

ಇಂದು–
ಮಂತ್ರಿ
ಅಧಿಕಾರಿ
ಗಳಾಗಿ ಹಾರಾಡುವವರಿಗೆ
ಅಂದು–
ಸ್ವಾತಂತ್ರ್ಯಕ್ಕಾಗಿ
ಹೋರಾಡಿ
ಬೀದಿ ಪಾಲಾದವರ
ನಂತರ–
ಸತ್ತವರ–
ಸಾಲ ಮನ್ನವಾಗಿದೆ.

ಈಗ–
ಸಂಪೂರ್ಣ ಮಣ್ಣಾಗಿದೆ.

ಚನ್ನಪ್ಪ ಕಟ್ಟಿ

# ಪ್ರಶ್ನೋತ್ತರ

ಸಹನೌ ಭುನಕ್ತು ಎನ್ನುತ್ತ
ಪರಪಂಕ್ತಿ ಮಾಡಿ
ಊಟಕ್ಕೆ ಕುಳಿತರು
ಸಮ್ಮೂರ ರಾಯರು

'ತುತ್ತಿಗೆ ಮೊದಲೆ
ಕೈತೊಳೆಯುವುದ ಏಕೆ'
ನೆರೆಮನೆಯ ಪುಟ್ಟ ಕೇಳಿದುದಕೆ,
ಕೆಲಸಗಳ ಬದಲಾವಣೆಯೆ
ವಿಶ್ರಾಂತಿ ಎಂಬಂತೆ
ಬಾಯಿ ಆಡಿಸುವುದ ಬಿಟ್ಟು
ಬಾಯ್ದೆರೆದು ಆಡಿದರು:
(ಬ್ರಹ್ಮಾಂಡ ಕಾಣಲಿಲ್ಲ ಅದು ಬೇರೆ ಮಾತು !);
"ಕೆಲಸವೇನೇ ಆದರು
ನಾವು
ಕೈತೊಳೆದೇ ಬೆನ್ನು ಹತ್ತುವವರು ?

ರಾಯರುತ್ತರವನಾಲಿಸಿದ ಪುಟ್ಟ
ರಾಯರಿನ್ನೊಮ್ಮೆ ಕೈ ತೊಳೆವ ಮುನ್ನ
ಜಾಗ ಬಿಟ್ಟ.

ಸಾ. ದಯಾ

# ಫುಟುಪಾತಿನ ಮೇಲೆ

ಬೆಳಕಿಲ್ಲದ ಈ ಫುಟುಪಾತಿನ ಮೇಲೆ
ತೆಕ್ಕೆ ಬದಲಾಯಿಸುತ್ತಾ
ಆಕ್ಟೋಪಸ್ ಬಂಧನಕ್ಕೆ
ಮೌನವಾದ ಬಿಕ್ಕಳಿಕೆಗೆ
ವಿಲವಿಲನೆ ಒದ್ದಾಡುತಿದೆ
ಕಸದ ಗುಪ್ಪೆಯಲಿ ಹೊಕ್ಕುಳ ಬಳ್ಳಿ.

ನೂರಾರು ಚಪ್ಪಲಿಗಳ ದನಿಗೆ ಕಿವಿಯಾಗಿ
ನೂರಾರು ಬಣ್ಣಗಳಿಗೆ ಕಣ್ಣಾಗಿ
ಸಂಜೆ ಬೆಳಕಿಗೆ ಕನಸು ಕಾಣುತ್ತಾ
ಎದೆ ತುಂಬ ನೋವು
ಈ ಫುಟುಪಾತಿನ ಮೇಲೆ.

ಕೆಳಗೆ ಒಳ ಚರಂಡಿಗಳಲ್ಲಿ
ಸದಾ ಜೋಗುಳದ ಹಾಡಾಗುವ ಪರಿಗೆ
ಮೇಲೆ ಹೊದಿಕೆಯಾಗುವ ಬೆಚ್ಚನೆಯ ಕಂಪು.
ರಾಶಿ ರಾಶಿ ನಕ್ಷತ್ರಗಳ ಬೆಳಕು ಮನೆತುಂಬ.

ಆಗ,
ಬೆಳಕಿಲ್ಲದ ಈ ಫುಟಪಾತಿನ ಮೇಲೆ
ಹುಟ್ಟುತ್ತದೆ ಮಗದೊಂದು ಚರಿತ್ರೆ
ಮತ್ತೆ ನನ್ನ–ನಿನ್ನಂತವರು ಗೀಚುತ್ತಾರೆ ಕವಿತೆ

# ಗೆಳೆಯನಿಗೆ

ಗೆಳೆಯಾ..
ಥೇಟ ಹುಸಿ ಕ್ರಾಂತಿಕಾರಿಗಳ ಹಾಗೆ
ಹೊಡಿ. ಬಡಿ, ಕಡಿಯ
ಮಾತುಗಳೇ,
ಕನಸುಗಳ ತುಂಬೆಲ್ಲ
ಕನವರಿಕೆ.

ಬಿಡಾಡಿ ನಾಯಿಗಳ
ಗಡಚಿಕ್ಕುವ
ಗದ್ದಲದೊಳಗೆ
ಹಳವಂಡಗಳ ನಿದ್ದೆ.

ಬಣ್ಣ ಬಣ್ಣದ ಕನಸು
ಒಮ್ಮೆಯಾದರೂ ನೀ
ಅನುಭವಿಸು.

ಮೌನ ಮೀರಿದ ಮಾತು
ಅದೋ; ನೀರ ಗಡಿಗೆಯ ತೂತು.

ಸೋರಿ ಖಾಲಿಯಾಗುವ
ಮುನ್ನವೇ
ಕೊಂಚ ರಿಪೇರಿಯಾಗಬೇಕು.

ಇಲ್ಲಾ,
ಸುರುವುತ್ತಲೇ
ಖಾಲಿಯಾಗಬೇಕು
ಮನುಷ್ಯ ಪ್ರೀತಿಯಂತೆ.

## ಎಂ. ಎಚ್. ಲಕ್ಷ್ಮೀನರಸಮ್ಮ

# ಚೌಕಟ್ಟಿನೊಳಗೆ

ಹುಟ್ಟಿದಾಗೊಮ್ಮೆ
ಪುಟ್ಟಕಾಗೆಯು ಹಾಗೆ
ಸುತ್ತೆಲ್ಲ ಹಾರಾಡಿದ್ದುಂಟು.
ಹೆತ್ತವರ ಮುದ್ದು
ದಕ್ಕಿದಾಗೊಮ್ಮೆ
ಕುಯ್‌ಗುಟ್ಟುತ್ತಾ ಬಾಲವಾಡಿಸಿದ್ದ ನೆನಪು.
ಪ್ರೀತಿ ಒಲುಮೆಗಳೆ
ಕಂಬಿ ಸರಳಾಗಲು
ಗಿಳಿಯು ಮರಿಯಾಗಿ ಹೋದೆ.

ಬಣ್ಣ ಪುಚ್ಚಗಳ ಕಂಡು
ಮೆಚ್ಚಿ ಬಂದ ಗಂಡು
ಗಟ್ಟಿ ಮೇಳದ ನಡುವೆ ಮಾರಾಟವಾದೆ.
ನನ್ನದೇ ಪರಿವಾರ
ಸುತ್ತುವಿರುವಾಗ
ಕಂಬಿಗಳಿಲ್ಲ ನನ್ನ ಸುತ್ತ ಈಗ.

ಪರಿಧಿ ಮೀರುವ ತಾಕತ್ತು
ರೆಕ್ಕೆ ಪುಕ್ಕಗಳಿಗೆ ಬರಲೇ ಇಲ್ಲ..
ಪಂಜರದೊಳಗಿನಿಂದಲೇ
ಪ್ರಪಂಚ ಕಾಣುವ ಅಭ್ಯಾಸ.

ಈಗಲೂ ಹಣಕುತ್ತಿರುವೆ
ಬಯಲು ಆಗಸದ ಕಡೆಗೆ.

## ಲತಾ ರಾಜಶೇಖರ

# ದಿನದ ಚಿತ್ರ

ಸುರುಳಿಗೂದಲ ಕಪ್ಪಿನಲ್ಲಿ
ಇಳಿಯಿತು ರಾತ್ರಿ ಮೆಲ್ಲಗೆ.
ರೆಪ್ಪೆ ತೆರೆದಾಗ ನೀನು
ಬೆಳಕು ಹರಿಯಿತು ಬೆಳ್ಳಗೆ

ಅದೆಲ್ಲ ನಿನ್ನೆಯ ವಿಷಯ.
ಇಂದಿನದನ್ನು ಹೇಳಲೆ ?

ತೆವಳುತ್ತದೆ ಇರುಳ ಬಸವನ ಹುಳು
ಗಾಯವಾಗಿದೆ ಅದರ ಕಾಲು !
ಸರಿಯುತ್ತದೆ ಅನಿವಾರ್ಯವಾಗಿ
ಇರಲಾರದೆ. ಹೋಗಲಾರದೆ।

ನಿನ್ನ ಕಣ್ಣೊಳಗೇ ಅರಳಬೇಕೆನ್ನುವ
ಹಟವಾದರೂ ಏಕೆ ಬೆಳಗಿಗೆ !
ರಾತ್ರಿಯೊಂದಿಗೆ ಸ್ಪರ್ಧೆ ನಡೆಸಿದೆಯೇನು
ಹಗಲು ನಿಧಾನವಾಗಿ ಹೋಗಲು ?
ಇದಕ್ಕೊ ಒಂಟಿ ಕಾಲು !
ಮೆಲ್ಲಗೆ ದಾರಿ ಸವೆಸುತ್ತದೆ
ಕುಂಟುತ್ತ, ಎಡವುತ್ತ
ದೂರ ದಿಗಂತದಲ್ಲಿ ಮೂಡುವವರೆಗೆ
ಚುಕ್ಕಿಗಳ ಸಾಲು !

ಸದ್ದುಗದ್ದಲ ಮಾಡದೆ ಮಲಗಿಬಿಟ್ಟಿವೆ
ಅನಿಸಿಕೆಗಳು ಮೌನವಾಗಿ
ಬೇಸರದ ನಾವೆ ತೇಲುತ್ತದೆ
ತೀರ ಕಾಣದ ಕಡಲ ನೀರಲ್ಲಿ

ಇರುತ್ತದೆ ದಿನದ ಚಿತ್ರ ಹೀಗೆ
ನೀನು ಬರುವವರೆಗೆ

ವಾಸುದೇವ ನಾಡಿಗ

# ಈ ಅವಸ್ಥೆಗಳು !

ಆಗ,

ಅವನು
ಕಳಚಿಕೊಳ್ಳುತ್ತಲೇ ಅವಸ್ಥೆಗಳ
ಹೆಜ್ಜೆ ಊರುವುದ ಅರಿತು ಬಿಟ್ಟಿದ್ದ
ಪೈ ಮಾನ ಭಾರ ಹೊತ್ತ ನಡಿಗೆಗೆ
ಪ್ರಶ್ನೆಯಾಗೇ ಉಳಿದದ್ದು ಗುರಿ !

ಈ ತಂದೆಗೋ ಅದೇನು ಹೆಮ್ಮೆ ?
ನಡಿಗೆ ಕಲಿತವನಡಿಗಡಿಗೂ ರಕ್ಷೆ
ಮಾನ ಹೊತ್ತು ನಿಂತ ಮೂರಾಗ್ಗಲಿಯ ಗಾಡಿಯ
ಧೂಳೊರೆಸುವ ಒಣ ಯತ್ನ

ಅವನು
ತೊದಲು ತೊದಲುಗಳ ಮೆಟ್ಟಿ ನಿಂತು
ಮಾತು ಮಾತುಗಳ ತುಂಬಿ ನಿಂತಿದ್ದ
ಸ್ವರ್ಗವನ್ನೇ ತೋರಿಸುವ ಮಾಯ-ಮೋಡಿಗೆ
ಲಂಗು ಲಗಾಮಿನದೇ ಕೊರತೆ !

ಈ ತಾಯಿಗೋ ಅದೇನು ಪ್ರೀತಿ ?
ಕಣ್ತುಂಬಿ ಬಂದು ಹೊರ ಉಕ್ಕುತ್ತದೆ
ಮೊಲೆಯೂಡಿಸುತ್ತಾ ಕಣ್ಮುಚ್ಚಿದ ಚಿತ್ರ
ಹಾಲುಗಲ್ಲದ ಕನಸಿನ ಚೌಕಟ್ಟು

*

ಈಗ,
ಅವನದು ಮಿತಿ ಮೀರಿದ ಕಳಚುವಿಕೆ
ಅವಸ್ಥೆಗಳ ಕಳೆಯುವಿಕೆ
ವ್ಯಕ್ತಿತ್ವದ ಕೊಳೆಯುವಿಕೆ

ತೂರಾಡುವ ನಡಿಗೆಗೆ
ಅಸ್ಪಷ್ಟ ಘಾಟು ನುಡಿಗಳಿಗೆ
ಕಪ್ಪಿಟ್ಟ ನೋಟಗಳಿಗೆ
ಹಾಲಾಹಲ ಒಸರುವ ಎದೆಗೆ
ಕಂಗಾಲಾದವರು..........
ಅದೇ ತಂದೆ ಅದೇ ತಾಯಿ
ಅದೇ ಮೂರಗ್ಗಲಿಯ ತಳ್ಳು ಗಾಡಿ
ಅದೇ ಅದೇ ಹಗಲಿಂಗನಸುಗಳು.

## ವಿದ್ಯಾಧರ ಮುತಾಲಿಕ ದೇಸಾಯಿ

---

## ಅವ್ಯಕ್ತ

ಅರ್ಥವಾಗದ ಅನೇಕ ಬದುಕಿನ ಎಳೆಗಳೆಲ್ಲ
ಹಾಸುಹೊಕ್ಕಾಗಿ
ಅನರ್ಥ ಪರಂಪರೆಗಳ ಲಾಳಿಗಳ ಮಧ್ಯ
ಯಥಾವಾಗಲೋ
ನುಸುಳಿದ ನಾನೊಂದ ನೂಲು ಎಳೆ.

ನೇಕಾರನ ಕೈ ಮಿಡಿತ ತಪ್ಪಿಸುವ ವ್ಯರ್ಥ
ಪ್ರಯತ್ನದಲ್ಲೇ
ಅಂತ್ಯ ಚಿತ್ರ ಚಿತ್ತಾರದೊಡನೆ.
ನಾನೊಂದು ಮೂರ್ತವಾಗುವ ಅವ್ಯವಸ್ಥೆಯಲ್ಲಿ
ವ್ಯವಸ್ಥಿತನಾಗಿ.
ನನ್ನೊಳಗಿನ ಎಲ್ಲ ಅಮೂರ್ತಗಳಿಗೂ ಬಣ್ಣ
ಬಳಿಯುವ ಕೆಲಸ ನನ್ನದಲ್ಲ ಎಂಬುದೂ ಗೊತ್ತು.

ಆದರೂ
ರಿಜೆಕ್ಟ ಮಾಲುಗಳ ಸಾಲಿನಲ್ಲಾದರೂ ಬರುವ ಧೈರ್ಯ
ಉಡುಗುವದು ನನ್ನದರ ನಂಬರ ಸಿಲೆಕ್ಟ ಆದಾಗ.
ಮಾರ್ಕೇಟು ರೇಗು ಗಗನ ಪ್ರಣಯು ತೊಡಗಿದಾಗಲೇ
ಬಾಜಾರು ಫ್ಯಾಶನ್ನು ಬದಲಾದ ಸುದ್ದಿ ಕೇಳಿ
ಹಳಿದುಕೊಳ್ಳುವ
ನನ್ನ ಮೋಕ್ಷನಾಡ ಜಾಲೀ ಗಿಡದ ಎಲೆಗಳಣಿಕೆಯು ದೂರ.
ಈಗ ಬಿದ್ದುಕೊಂಡಿರುವ ಗುದಾಮಿನ ಕತ್ತಲೊಳಗೆ
ನೊಣಬೆಗಳು ಕಟ್ಟಿದ ಬಲೆಗಳಿಗೆ ಆಸರೆಯಾಗಿ,
ಒಮ್ಮೊಮ್ಮೆ ಅನಿಸುವದು

ಬಿಳಿಯು ಬಟ್ಟೆಗಳ ಎಳೆಯಾಗಿದ್ದರೆ ಲೇಸಿತ್ತೇನೋ !
ಶವದ ಮೇಲಾದರೂ ಹೊದೆಸಲು ಬರುತ್ತಿತ್ತು.

ಶೇಖರ ಲದವಾ

---

## ಬೆಳದಿಂಗಳ ಝುಳಾ

ಮ್ಯ ಮುರದ ದುಡದ್ರೂ
ಮ್ಯ ತುಂಬ ಅರಬಿ ಇಲ್ದ ಮುಂದೀಗ
ರಾತ್ರಿ.......
ಮ್ಯ ಮುರ್‍ಯಾಕ ಹಾದಿ
ಮಾನಾ ಮುಚ್ಚೊ ಕೌದಿ......

ಹುಣಿವಿ ಬಂತಂದ್ರ
ಮನಸ ತುಂಬ ಹುಣ್ಣಿ ಏಳ್ತಾವ...
ಬೆಳದಿಂಗಳ ಝುಳಕ್ಕ
ಚುರು ಚುರು ಅಂತಾವ......

ಗುಡಸಲ ಖಿಂಡ್ಯಾಗ ಹಾಲ ಚೆಲ್ಲತಿ
ನಮ್ಮಾನಾ ಬೀದಿಗ ಹರಸತಿ
ನಮ್ಮನ್ನ ಬಸವನ ಹುಳಾ ಮಾಡಿಬಿಡ್ತಿ......

ಯಾಕರ ಬರತಿ ಚಂದಪ್ಪಾ.......
ಕೊಳಗೇರಿ ಹೆಣ್ಮಕ್ಳು ಮನಶ್ಯಾರ ಅಲ್ಲೇನಪಾ......

ದಿನಾ ಹುಣಿವಿ ಬಂದ್ರೂ ಅಡ್ಡಿ ಇಲ್ಲಪಾ
ಮಂದ್ಲ
ನಮ್ಮ ಬಾಳೇದಾಗಿನ
ಅಮಾಸಿ ಹೋಗ್ಲಿಪಾ ......

ಶ್ರೀಮತಿ

---

## ಡಿಪಾರ್ಟ್‌ಮೆಂಟ್

ಸಾಗುತ್ತಿದೆ ಜೀವನ
ಟೇಬಲಿನಿಂದ ಟೇಬಲಿಗೆ
ಅಧಿಕಾರಿಯಿಂದ ಅಧಿಕಾರಿಗೆ
ಕಡತಗಳ ವಿಧಾನದಲಿ
ವಿಧಾನಸೌಧದ ಹಾದಿಯಲಿ
ಖಾಯಿಲೆ ಬಂದಾಗ ಅತಿ ಜರೂರಾಗಿ
ಸಾಕಾದಾಗ
ಮಂದಗಮನದಲ್ಲಿ
ಚಿತಾಗಾರದ ಕನಸಿನಲಿ

ದಿನವೂ ಓಡುತ್ತದೆ
ನನ್ನ ಅಧಿಕಾರಿಯ ಕಾರು
ನಮ್ಮ ಅಧಿಕಾರದ ತೇರು
ಮನೆಯಿಂದ ಕಛೇರಿಗೆ
ಕಛೇರಿಯಿಂದ ವಿಧಾನಸೌಧಕ್ಕೆ
ಅಫಿಷಿಯಲ್ ಕೆಲಸದ ಮೇಲೆ

ಅಫಿಷಿಯಲ್ ಕೆಲಸದ ಮೇಲೆ
ಮಗಳ ಸ್ಕೂಲ್‌ವರೆಗೆ
ತರ್ಕಾರಿ ಮಾರ್ಕೆಟಿನವರೆಗೆ
ಆಗಾಗ
ಬೇಜಾರಾದಾಗ
ಬ್ರಿಗೇಡ್ ರಸ್ತೆಯ
ಬಾರಿನೊಳಗೆ.

ಗುಂಡಿಕ್ಕಬಹುದೀಗ
ಪಂಜಾಬಿನ
ಭಯೋತ್ಪಾದಕರಂತೆ
ನೋಟೀಸು ಸಸ್ಪೆಂಡ್
ಇತ್ಯಾದಿಗಳಲ್ಲಿ

ಗುಂಡಿಕ್ಕಿದ್ದಾರೆ ಈಗ
ನನ್ನ ನಿಮ್ಮೊಂದಿಗೆ
ನೈಟ್ ಬಾರಿನಲ್ಲಿ
ಸರ್ಕಾರಿ ವೆಚ್ಚದಲ್ಲಿ

ನಮ್ಮಲ್ಲೂ ಇದೆ
ಸ್ನೇಹ ಪ್ರೀತಿ ವಿಶ್ವಾಸ
ಅರ್ಧ ಕಾಫಿಯಲ್ಲಿ
ಬಾಯಿ ಮಾತಿನಲ್ಲಿ
ಒಂದು ದಮ್ಮಿನಲ್ಲಿ.

ಇಷ್ಟಾದರೂ
ಒಂದುಗೂಡಿದ್ದೇವೆ
ಒಂದೊಂದು ಸಾರಿ
ಕೆಲವು ಕಾರ್ಯಕ್ರಮಗಳಲ್ಲಿ
ಒಂದೆ ಸಾರೀ
ಹಲೋ, ನಮಸ್ಕಾರಗಳಲ್ಲಿ
ಬಲವಂತದ ನಗೆಯಲಿ
ಚೀಮಾರಿಯ ಮನಸಿನಲಿ

ಹೊಸ ಬಟ್ಟೆ
ಧರಿಸಿದ್ದೇನೆ
ಪ್ರೊಮೋಷನ್ ಸಿಕ್ಕಾಗ
ಅರಿಯರ್ಸ್ ಬಂದಾಗ
ನನ್ನ ಸೋಬಾನವಾದಾಗ

ಸಾಧಿಸಿದ್ದೇವೆ ಪ್ರಗತಿ
ಸಾಲಸೋಲಗಳಲ್ಲಿ
ಚೀಟಿ ಸೊಸೈಟಿಗಳಲ್ಲಿ
ಒಳಜಗಳದಲಿ
ಕಮಿಷನ್ ಬಂದ ಕೆಲಸದಲ್ಲಿ
ಕಾಯುತ್ತಿದ್ದಾರೆ
ನನ್ನ ಸಹದ್ಯೋಗಿಗಳು
ಸ್ನೇಹ
ಪ್ರೀತಿ
ವಿಶ್ವಾಸಗಳಲ್ಲಿ
ಸೆಂಡ್ ಆಫಿನ ಸ್ವೀಟಿಗಾಗಿ
ಸಾಲದ ವಸೂಲಿಗಾಗಿ
ಕೊನೆಗೆ
ನನ್ನ
ಪಿಂಡಕ್ಕಾಗಿ
ಕೊನೆಗೆ ನನ್ನ ಪಿಂಡಕ್ಕಾಗಿ

ಎ. ಸದಾನಂದ ಹೆಬ್ಬಾರ

---

## ಸತ್ಯಗೀತೆ

(ಅಣಕವಾಡು : ಕವಿ ಅಡಿಗರ ಕ್ಷಮೆ ಕೋರಿ)

ನಾವೆಲ್ಲರು ಒಂದೆ ಜಾತಿ
ಒಂದೆ ಮತ. ಒಂದೆ ಕುಲ
ನಾವು ದನುಜರು—

ಕಾಲ ಧರ್ಮ ಕೆತ್ತಿ ಕಡೆದ
ಮನುಜರೂಪಿ ಶ್ವಪಚರು
ನಾವು ದನುಜರು-

ನಾವು ಶುಂಭ ನಿಶುಂಭಾದಿ
ರಕ್ತ ಬೀಜಾಸುರರು
ಕ್ರೂರ ದನುಜರು

ಜಾತಿ, ಪ್ರಾಂತ, ಭಾಷೆ, ಐಕ್ಯ
ಒಂದ ನಾವು ಲೆಕ್ಕಿಸೆವು
ಸಿಕ್ಕಿದವರ ರಕ್ತ ಹೀರಿ
ಸೊತ್ತು ಸಹಿತ ಕೊಲುವೆವು

ಯಥಾ ರಾಜ ತಥಾ ಪ್ರಜಾ
ಇದುವೆ ನಮ್ಮ ಮಂತ್ರವು
ರಾಜರನ್ನೆ ಕುಟ್ಟಿ ಕಳೆದ
ಹೆಬ್ಬೆಟ್ಟು ಪ್ರಭುಗಳು
ಹಳತನೆಲ್ಲ ಕೊಚ್ಚಿ ಕಳೆದು
ಹೊಸತು ಮಾಡೆ ಬಾರದುಳಿದು
ಕೆಳೆತನವನು ತೊಳೆದು ಬಳಿದು
ನಮ್ಮ ನಾವೆ ಕೊಲುವೆವು
ಪರರ ದಾಳಿ ಸಹಿಸೆವು ॥

ಐದು ವರ್ಷಕೊಂದು ಸಂತೆ
ವೈಭವದಲಿ ನಡೆಸುವೆವು
ತಲೆಯ, ಕಲೆಯನೆಲ್ಲ ನೆಲೆಯ
ಬಲೆಯನೊಡ್ಡಿ ಪಡೆವುವು
ಪಂಚವರ್ಷ ಯೋಜನೆಯ
ಪಾಂಚಜನ್ಯ ಮೊಳಗಿಪೆವು
ಬಡತನಕ್ಕೆ ನಲುಗೆವು
ಅಡೆತಡೆಗಳಿಗಳುಕೆವು॥

ಒಗ್ಗದಂಥ ಜನರ ಜಗ್ಗಿ
ಹಿಗ್ಗಾಗ್ಗ ಮುಗ್ಗಾಗ್ಗ ಕೊಲುವೆವು

ಕನಸಿನಂಥ ನೆನಪ ನೆಪದ
ಸ್ವರ್ಗ ಭುವಿಗೆ ತೆರೆವುವು

ಕಡಲ ಒಡಲಿನಿಂದ ಶುದ್ಧ
ಚಿನ್ನವನ್ನೆ ತರುವೆವು
ಗುಟ್ಟಿನಲ್ಲೆ ಗಡಿಗೆಯಿಟ್ಟು
ಕಳ್ಳ ಭಟ್ಟಿ ಇಳಿಪೆವು
ಕಳ್ಳ ನೋಟು, ಮರಿಜುವಾನ
ಎಲ್ಲ ನಾವೆ ಕೊಡುವೆವು
ನಮಗೆ ನಾವೆ ಧಣಿಗಳು
ಭಂಗಾರದ ಗಣಿಗಳು॥

ಠಕ್ಕ ಢಕಾಯಿತರು ನಮಗೆ
ದೇಶ ಸೂರೆಯಾಯಿತು
ವೇಷ. ಭಾಷೆ. ರೀತಿ ಬೇರೆ
ಚಂಬಲ್ ಎಮಗೆ ನಂಗಲು
ಕೃಷ್ಣ, ಕೊಯ್ನ, ಡಿ.ವಿ.ಸಿ
ಲೂಟಿಗೇನು ಕಡಿಮೆಯೇ
ಇಲ್ಲ ನಮಗೆ ನಾಚಿಕೆಯು
ತುಂಬುವೆವು ಕಿಸೆಯನು॥

ಕೆಲಸ ಕೆಡುವ ಸಮಯ ಬರಲು
ಭಾಷಣಗಳ ಬಿಗಿವೆವು
ಯುವ ಗಣವನೆ ಹುಚ್ಚೆಬ್ಬಿಸಿ
ನಮ್ಮ ಸೊತ್ತ ಸುಡುವೆವು
ಲೈಟು, ಬಸ್ಸು, ರೈಲು, ಜೀವ
ಧೂಳಿಪಟವಾಗಲು
ಹರತಾಳ ಬಂದ್ ಮುಷ್ಕರದಲಿ
ಬೆಂಕಿಯಿಟ್ಟು ಕುಣಿಪೆವು

ಇದು ಸುರಾಜ್ಯ ಇದು ಸ್ವರಾಜ್ಯ
ಇದುವೆ ರಾಮರಾಜ್ಯವು
ಯಾವ 'ರಾಮ' ಎಂದು ನಾವು
ಕೇಳದಂತೆ ಮಾಳ್ಪೆವು॥

## ಬಿ. ಕೆ. ಸರಸ್ವತಿ ಜಡ್ಡಿಗದ್ದೆ

# ಏನ ಹುಡುಕುತ್ತಿದ್ದಿ ಗಾಂಧಾರಿ?

ಹೆಣಗಳ ರಾಶಿಯಲ್ಲಿ ನಿನ್ನ ಭವಿಷ್ಯ
ಹುಡುಕುತ್ತಿದ್ದೀಯೇನೆ ಗಾಂಧಾರಿ?
ಕುರುಡ ಗಂಡನ ಕಣ್ಣಾಗಬೇಕಾಗಿದ್ದ ನೀನು
ಬಟ್ಟೆಯು ಪಟ್ಟಿ ಕಟ್ಟಿಕೊಂಡು ಆದರ್ಶ ಪತಿವ್ರತೆಯು ಪಟ್ಟಿ
ಕಟ್ಟಿಸಿಕೊಳ್ಳಲು ಹೋದೆಯಲ್ಲ.
ಈಗ ನೊಡಿಲ್ಲಿ
ನೀ ಕಾಲಿಟ್ಟಲೆಲ್ಲ ನಿನ್ನದೇ ಕರುಳ ಕುಡಿಗಳ ನೆತ್ತರು
ನಿನ್ನ ಪಾದಕ್ಕೆ ಅಭಿಷೇಕವಾಗುತ್ತಿದೆಯಲ್ಲೆ.
ನಿನ್ನ ಕುರುಡ ಮೋಹದ ಜ್ವಾಲೆಯಲ್ಲಿ
ಮೂಳೆ ಮಾಂಸದ ತುಂಡು ಪಟ-ಪಟನೆ ಸಿಡಿದು
ನಿನ್ನಂತಃಪುರದ ಗೋಡೆಗಳಲ್ಲಿ
ರಕ್ತದ ಚಿತ್ತಾರ ಬಿಡಿಸಿವೆ ನೋಡೆ.
ದುರ್ಯೋದನ ದುಶ್ಯಾಸನರಿಗೆ
ಅಂದೇ ಹೇಳಬಾರದಿತ್ತೆ ಕೊಂಚ ಬುದ್ಧಿವಾದ?
ನಿನಗೀಗ ಬರುತ್ತಿರಲಿಲ್ಲವೇನೋ
ರಣರಂಗದಲ್ಲಿ ಶವಗಳ ನಡುವೆ
ಕನಸುಗಳ ಹುಡುಕುವ ಈ ಗತಿ.
ಓ ಗಾಂಧಾರಿ, ನೀನು
ಆದರ್ಶ ಸತಿಯಂತೂ ಆಗಲಿಲ್ಲ ಬಿಡು
ಕೊನೆಗೆ ಆದರ್ಶ ಮಾತೆಯೂ ಆಗಲಿಲ್ಲವಲ್ಲೆ,
ಗರ್ಭ ಕಟ್ಟಿದಾಗಲೇ ಮತ್ಸರದ ಮುದ್ದೆಯನ್ನೊಡೆದು
ಗಡಿಗೆಯೊಳಗಿಟ್ಟ ನಿನ್ನ ಭ್ರಾಂತಿಗೆ ಏನೆನ್ನಲಿ ಹೇಳು
ಅಂದೇ ಕಣ್ಣು ಕಳೆದುಕೊಂಡಿರುವ ನೀನು
ಈಗೇನು ಹುಡುಕುತ್ತಿರುವಿ ಗಾಂಧಾರಿ ಇಲ್ಲಿ?
ಅಂತರಂಗದೊಳಗೊಮ್ಮೆ ಇಣುಕಿ ನೋಡು
ಹೆಪ್ಪುಗಟ್ಟಿದ ಸ್ವಾರ್ಥ ಇನ್ನೂ ಕರಗಿಲ್ಲವೇನೆ?
ಗಾಂಧಾರಿ, ನಿನ್ನೊಳಗನ್ನು ನೋಡಿಬಿಟ್ಟಾರು ಮಂದಿ
ಬೇಗ ಮುಚ್ಚಿಬಿಡೇ ಹೃದಯವನ್ನು,

ಅಬ್ದುಲ್ ರಹೀಮ ಗೋವ್ವಾಳ

## ಹಾದರ

ಈವರು
ಪತಿವ್ರತೆಯು ಪಟ್ಟ ಧರಿಸಿ
ಎಲ್ಲರ ಕಣ್ಣು ಮುಚ್ಚಿಸಿ
ಸೆರಗು ಹಾಸಿದಲ್ಲಿ
ಆದರ.

ಅವರು
ಹೊಟ್ಟೆ ಹಿಟ್ಟಿಗಾಗಿ
ಎಲ್ಲರ ಎದುರಲ್ಲಿ
ಮೈ ಮಾರಿಕೊಂಡಲ್ಲಿ
ಹಾದರ.

ಅಂಬಾದಾಸ ವಡೆ

## ಅಂತರ

ತಿಂಗಳಿಗೆ ಮಾತ್ರ ಪಗಾರ
ಇಸಿದುಕೊಳ್ಳುವ
ಕಿರಾಣಿ ನೌಕರನ ಹೊಟ್ಟೆ
ಸದಾ ಕೂಗು !

ತಿಂಗಳಿಗೆ ಮಾತ್ರ
ಪಗಾರ ಬೀಸಾಕುವ
ಧಣಿಯ
ಗಾದಿಗೊತ್ತಿದ ಕುಂಡೆ
ಸದಾ ಕೂಗು !

ಜಿ. ಕೆ. ಎಸ್ಸಾರ್

---

## ತಾಜ್ ಮಹಲು

ಏನೆಲ್ಲ ಹೇಳಿದರೂ
ಕೇಳಲೊಲ್ಲರು ಜನರು.
ಕಟ್ಟುವಾಸೆ ನನಗೂ
ಒಂದು ತಾಜ ಮಹಲು.

ಆದರೆ, ಸ್ವಾಮಿ,
ತಯ್ಯಾರಿಲ್ಲವಲ್ಲ
ನನ್ನವಳು
ಅದಕಾಗಿ ಸಾಯಲು.

ಕಮಲಾ ಮೂರ್ತಿ

---

## ಮಾಧವನಿಗೆ

ನಿನ್ನ ಕೈಯ
ಬಿದಿರ ಕೊಳಲಾಗುವ
ಆಸೆ ನನಗೆ.

ರಾಧೆ-ರುಕ್ಮಿಣಿಯು
ತಬ್ಬುವಾತರದಲ್ಲಿ
ಅದನ್ನೆಲ್ಲಿ
ಕಿಟ್ಟುಬಿಡುವೆಯೊ

ಎಂಬ
ದಿಗಿಲು ನನಗೆ

ಕವಿ ಕಂದ, ಗದಗ

## ಕಾಶ್ಮೀರ.... ಕನ್ಯಾ

ಕಾಶ್ಮೀರದಿಂದ
ಕನ್ಯಾ
ಕುಮಾರಿಯ ವರೆಗೆ
ಮೂಢ
ನಂಬಿಕೆ ಕಂದಾಚಾರಗಳ ವಿರುದ್ಧ
ಭಾಷಣ ಮಾಡಲು
ಹೋಗಿದ್ದ ಈ ಹಿರಿಯ

ಹಾಗೆಯೇ ಮರಳುವಾಗ

ತಿರು
ಪತಿಯಲ್ಲಿ ತಲೆ ಮುಂಡನ ಧಾರಿಯಾಗಿ
ಕಾಶಿಯಲ್ಲಿ ರುದ್ರಾ-
ಕ್ಷಿ ಮಾಲೆಗಾಗಿ ಚೌ-
ಕಾಸಿ
ನಡೆಸಿದ್ದ.

'ಗ್ರೀಷ್ಮ'

## ಚಿಗುರು ಒಗರು

ಮದುವೆಯಾಗುವ
ವರೆಗೂ
ನನ್ನನ್ನು
'ವಸಂತನ ಚಿಗುರು'
ಎಂದು ಉಲಿಯುತ್ತಿದ್ದವಳು

ಈಗ
'ಬರೀ ಒಗರು'
ಎಂದು ಮೂದಲಿಸುತ್ತಾಳಲ್ಲ!

ಬಿ. ನರಸಪ್ಪ

## ಬಿರುದು

ಆಟ ಪಾಠದಿ ನಾವು
ಕೆಳಶ್ರೇಣಿ.
ಜನಸಂಖ್ಯೆ ಸ್ಫೋಟದಲಿ
ಏರಿಹೆವು ಭಾರಿ ಏಣಿ.

ಎಂಥ ಜಾಣರು ನಾವು
ಎಂಬುದನು ತಿಳಿದು
ಕೊಟ್ಟಿಹರು ನಮಗೆ
ಕೋಣನ ಬಿರುದು.

ಪ್ರಕಾಶ ಬೆಳಕೂಡ

## ಪರಿಣತ

ಗ್ರಾಮೀಣ ಪ್ರದೇಶದ
ಶಾಸಕರೊಬ್ಬರನ್ನು ಕರೆದು
ಗೌರವ ಡಾಕ್ಟರೇಟು
ಕೊಟ್ಟರು.

ಅವರೀಗ
ಪಕ್ಷದ ಲಾಬಿಯಲ್ಲಿ
ಯಾರಿಗೆಷ್ಟು
ಅಧಿಕಾರದ ಜ್ವರವಿದೆಯೆಂದು
ಹೇಳಬಲ್ಲರು.

ಎಸ್. ವಿ. ಪ್ರಭಾವತಿ

## ಸಂಕೇತ

ಕೆಂಪು ಗುಲಾಬಿ
ನೀಲಿ ಪೆನ್ನು
ಹಸಿರು ಸೀರೆ
ಹೊಸ ಹೂವು

ಎಲ್ಲ ಒಂದೊಂದೇ ಒಂದೊಂದೇ
ಸಂಕೇತವಾಗುತ್ತಾ
ಹೋಗಿಬಿಟ್ಟರೆ

ಕೊನೆಗೆ
ಹೂವೂ ಅರಳುವುದಿಲ್ಲ
ಹಸಿರಿಗೂ
ಉಸಿರಿರುವುದಿಲ್ಲ.

ಬಿ. ವಿ. ಜಿ. ಪ್ರಸಾದ

## ಸಾಕ್ಷಿ

ಯಾರು ಹೇಳಿದರು
ನಿಮಗೆ, ನಾವು
ನಡೆಯುತ್ತಿಲ್ಲವೆಂದು
ಹಿರಿಯರ ಹಾದಿಯಲ್ಲಿ ?

ಬೇಕಾದರೆ ಬಂದು ನೋಡಿ
ಸಂಜೆಯ ವೇಳೆ
ನಾವಿರುತ್ತೇವೆ
ಮಹಾತ್ಮಾ ಗಾಂಧಿ ಬೀದಿಯಲ್ಲಿ !

**ಬಿ. ಎ. ಪಾರ್ವತಿ ಅಪ್ಪಣ್ಣಪ್ಪಯ್ಯ**

## ಸಮಾಜ

ರಾಘವೇಂದ್ರ ಬಾರ್
ರಾಜಕುಮಾರ ಮಾಂಸದಂಗಡಿ
ಗಣೇಶ ಬೀಡಿಗಳಿಗೆ
ದುಂಬಾಲು ಬೀಳುವ ಜನ ಕಂಡು

'ಸರಸ್ವತಿ ಪುಸ್ತಕ ಭಾಂಡಾರ'ದ
ಮಾಲಿಕ ಆರು ತಿಂಗಳಲ್ಲಿ ಬೀಗ ಜಡಿದ.
ಪುಸ್ತಕದ ಸ್ಥಾನದಲ್ಲಿ
ಮದ್ಯ ತುಂಬಿ ಮೆರೆದ.

**ಪೂರ್ಣಿಮಾ ಲಾಗದಮನೆ**

## ನೆನಪು

ನೆನಪೆಂಬುದು
ಚುಚ್ಚುವ
ಮೊಸೆಯ ಹಾಗೆ.
ನೋವಾದರೂ
ಹಿತ.

**ಬಸವಪ್ರಭು ಪಾಟೀಲ**

## ಉಪಪ್ರಧಾನಿ

ಮೊರಳಿ ಉಪಪ್ರಧಾನಿಯಾಗಿ
ದೇವಿಲಾಲ್-
ಎಂಬ ಸುದ್ದಿ ಓಡುತ್ತಿದ್ದಂತೆಯೇ
ಹೋದ ಸಂತೆಯಲಿ ಮಾರಿದ ನಮ್ಮ ಎತ್ತು
ಮರಳಿ
ಮನೆಗೆ ಬರಬೇಕೆ ?

ಭೀಷ್ಮ ತಡಸ

## ಏನು ಮಾಡಲಿ ?

ನಾ ಏನು ಮಾಡಲಿ
ಹತ್ತು ಹಲವು ಬಾರಿ
ಬೇಡವೆಂದರು ಕೂಡ
ತಿರುಗಿ ಬರುತಿವೆ ನೆನಪುಗಳು.

ಮಧ್ಯ ಹರಿದ ಸೀರೆಯನು
ಹೇಗೆ ಉಟ್ಟರೂ ಕೂಡ
ಹರಿದ ಭಾಗ
ಮಧ್ಯದಲ್ಲೇ ಬರುವಂತೆ.

ಮಲ್ಲಿಕ್ ಟಿ. ಬಿ.

## ಕೊಡಲಿ

'ನನ್ನಲ್ಲಿ
ನೆರಳಿದೆ
ಹಣ್ಣಿದೆ
ಹೂವಿದೆ.
ನಿನಗೇನ
ಕೊಡಲಿ?'
ಎಂದ ಮರಕ್ಕೆ
ನೀಚ ಮಾನವ
ಬೀಸಿದ
ಕೊಡಲಿ.

ಬಿ. ಎಸ್. ಮಂಜುಳಾದೇವಿ

---

## ಭಯ

ಯಾರಾದರೂ ಕಂಡಾರು
ನನ್ನ
ನಿನ್ನೆದೆಯ ಮೇಲೆ
ಎಂದು ಹೆದರಿ
ಒಳಗೆ
ಸೇರಿಬಿಟ್ಟೆ.

ಮ. ಶ್ರೀ. ಮುರಳಿಕೃಷ್ಣ

---

## ಪ್ರಗತಿ

ಅಜ್ಜ ಬಿತ್ತಿದ
ಅಪ್ಪ
ಬೆಳೆಸಿದ
ಮರವನ್ನು
ಕಡಿದನು ಸಲೀಸಾಗಿ
ಕುಲೋದ್ಧಾರಕ
ಮಗ !

ಆರ್. ಸುಧಾ

---

## ಗುಟ್ಟು

'ಬರುವ ಹಾಗೆ'
ಬಹುಮಾನ
ಬರೆವೆ ಹೇಗೆ ಕವನ ?'-
ಕೇಳಿದಳು ಗೆಳತಿ.
'ಅರ್ಥವಿಲ್ಲದ್ದನ್ನು
ಅರ್ಥವಾಗದಂತೆ'.-
ನಕ್ಕಳು ಕವಯಿತ್ರಿ.

ಹಂ. ರಾ. ಸುಧೀಂದ್ರಕುಮಾರ

## ಪ್ರೇಮಕಲ (ಹ)

'ಕಾಡದಿರು, ಹುಡುಗಿ.
ನನ್ನನ್ನು ಈ ಪರಿ.
ಇನ್ನೂ ದೂರವಿದೆಯಲ್ಲಾ
ಮುದ ನೀಡುವ
ವಸಂತ !'
'ಪ್ರೇಮಿಗಳಿಗಿಲ್ಲ ಋತು ಕಾಲ ಮಿತಿ.
ಒಲಿದು ಬಂದವಳನ್ನು
ಬೇಡವೆನ್ನುತ್ತೀಯಲ್ಲಾ ಹುಡುಗಾ,
ಹೇಳು. ನೀನ್ಯಾವ
ಸಂತ?'

ಸುಮ ಜಿ. ಭಟ್

## ನೆಟ್ಟದ್ದು

'ಕಾಡು ಬೆಳೆಸಿ ನಾಡು ಉಳಿಸಿ'
ಎಂದು ಹೇಳುವ ಮಂದಿ
ಕಾಡು ಕಡಿದು
ನೆಟ್ಟದ್ದು ಮಾತ್ರ
ಫಲಕವನ್ನು.

ಹಾ. ಉ. ಸೊರಬ

## ಸಹಸ್ರಪದಿ

ಮಳೆಗಾಲದಲ್ಲಿ
ನವಜೋಡಿ
ಒಂಟಿ ಕೊಡೆಯ ಸೂರಿನಡಿ
ಕೂಡಿ ತುಳಿದದ್ದು
'ಸಹಸ್ರಪದಿ' !

ಹೆಚ್. ಎನ್. ಸೋಮಶೇಖರ

## ಹೊಂದಾಣಿಕೆ

ಉಂಡು
ಮಲಗುವವರೆಗೂ
ಜಗಳ ಹೊಡೆಯುವ
ಗಂಡ–ಹೆಂಡಿರು
ಒಂದೇ
ಹೊದಿಕೆ ಹೊದ್ದು
ಗೊರಕೆ ಹೊಡೆಯುವರು.

ವಸಂತ ಮುಲ್ಲಾಪುರ

## ಹೆಣ್ಣು

ಗಂಡು ಈಚಲ
ಮರಕೆ
ಹೆಣ್ಣು ಗಡಿಗೆಯು
ಕುಣಿಕೆ
ತೆರವು ತುಂಬಲು
ಇನ್ನಾರದೋ ಹಿಂಬಾಲು.

ವಿಜಯಕಾಂತ ಪಾಟೀಲ

## ದೂರಾಲೋಚನ

ಹಸಿ ಹಸಿಯಾದ
ಹಸಿರಿಗೆ
ಬಾಯಿ ಹಾಕುವ ಮುನ್ನ
ಪಶು ಯೋಚಿಸಿತು:
ಅಕಸ್ಮಾತ್ ಬಸಿರಾದರೆ...

## ವಿಜಯೇಂದ್ರ ಕುಲಕರ್ಣಿ

### ರಂಗವಲ್ಲಿ

ನಿಶೆ
ಆಗಸದ ಅಂಗಳಕ್ಕೆ
ಹಾಕಿದಳು
ನಕ್ಷತ್ರಗಳ ರಂಗವಲ್ಲಿ
ಉಷೆ
ಇಬ್ಬನಿಯ ತಳಿ ಹೊಯ್ದಾಗ
ರಂಗವಲ್ಲಿ
ಎಲ್ಲಿದೆ ಅಲ್ಲಿ ?

## ವಿಶ್ವನಾಥ ಬದಿಕಾನ

### ಪರಸ್ಪರ

ಚಿಗುರೆಲೆಗಳ ಮಧ್ಯ
ಚಿಲಿಪಿಲಿಗುಡುತ್ತಿದ್ದಾಗ
ಗಂಡು ಹೆಣ್ಣನೊಂದಿಗೆ ಹೇಳಿತು:
ತತ್ತಿಗೆ ನೋವಾಗಬಾರದೆಂದು.

## ವೀಣಾ ಬನ್ನಂಜೆ

### ಸಾಮ್ಯ

ಹಗಲೆಲ್ಲ ಮುತ್ತು ಅಪ್ಪುಗೆಯಲಿ ಕಳೆದು
ರಾತ್ರಿ ನನ್ನಾಳಕೆ ಇಳಿದಾತ ನನಗೆ
ಹಗಲೆಲ್ಲ ಸಣ್ಣ ಪುಟ್ಟ ಕಳ್ಳತನ ಮಾಡಿ
ರಾತ್ರಿ ದರೋಡೆ ನಡೆಸುವವನಂತೆ
ಕಾಣುತ್ತಾನೆ.

**ಶಿವಕುಮಾರ ಕಲ್ಲೂರ**

## ಕಾವ್ಯಶಕ್ತಿ

ವ್ಯವಸ್ಥೆ ಧಿಕ್ಕರಿಸಿ
ಕ್ರಾಂತಿ ಕಾವ್ಯ ಬರೆಯಲು
ಕುಳಿತ ಬಂಡಾಯ ಕವಿಯು
ಪೆನ್ನಿಗೆ ಹೆದರಿ ಹಾಳೆಯು
ಪುಟಗಳೂ ಸಹ ಪಟ
ಪಟನೇ ಹಾರಿ ಹೋದವು !

**ಶಿವಪ್ರಸಾದ ಎಲ್. ಹಾದಿಮನಿ**

## ಮಾನವ

ಆಕಾಶದಲ್ಲಿ
ಹಾರುವುದನ್ನು ಕಲಿತು
ಭೂಮಿಯ ಮೇಲೆ
ಬಾಳುವುದನ್ನು ಮರೆತ
ಬುದ್ಧಿ ಜೀವಿ.

**ಶ್ರೀನಿವಾಸ ಜಾಲವಾದಿ**

## ನಕ್ಷತ್ರಪುಂಜ

'ಕಣ್ಣುಗಳಲ್ಲೇಕೆ ಕೊಲ್ಲುತ್ತಿ ?
ತಿಂದು ಜೀರ್ಣ ಮಾಡಿಕೊ.'
ಎಂದರೆ
'ಆಗಲೇ ಆಯ್ತು'ಂದು
ತೋರುವಳಲ್ಲಾ
ನಕ್ಷತ್ರ ಪುಂಜವನ್ನು !

# ೧೯೯೨ರ ಪ್ರಕಟನೆಗಳು

## ಕಾವ್ಯ

ಅಭಿನಯದ ಬಯಲು : ವೀಚಿ; ಚಲನ ಪ್ರಕಾಶನ ಸಹಕಾರಿ ತುಮಕೂರು ೬: ರೂ. ೨೫.

ಭಗ್ನ ಪ್ರತಿಮೆ : ಡಿ ಲಿಂಗಯ್ಯ; ದಿನಕರ ಪ್ರಕಾಶನ. ಬೆಂಗಳೂರು ೮೫. ರೂ. ೨೦.

ಭಾವ ಕಾವೇರಿ : ಮ. ಸುರೇಶಬಾಬು, ಶ್ರೀಶಾಂತಿ ಸ್ಟೋರ್ಸ್, ಶ್ರೀನಿವಾಸಪುರ; ರೂ. ೬.

ದಿಲ್ಲಿ ಮತ್ತು ಪಾರಿವಾಳ : ರವಿ ಉಪಾಧ್ಯ: ೫೬೧/೧ ಮಠಗಲ್ಲಿ. ಬೆಳಗಾವಿ, ರೂ. ೨೦.

ಹೀಗೇಕೆ–ಹೀಗಿರಲಿ ; ಪ್ರಮೋದ ಮುಂ ಜಿಲ್ಲಾ ಸಂಪನ್ಮೂಲ ಘಟಕ, ಅರಸಿಕೆರೆ ರೂ. ೧೫.

ಕಾಚಕ್ಕಿ : ಸಂ–ಹಾಲತಿ ಸೋಮಶೇಖರ: ಕನ್ನಡ ಸಾಹಿತ್ಯ ಸಂಘ. ಮೈಸೂರು ರೂ. ೧೫.

ಬುಗ್ಗೆ : ಸಂ–ಎಸ್ಕೆ ಕೊನೆಸಾಗರ; ಯಶಶ್ರೀ ಪ್ರಕಾಶನ. ಹುನಗುಂದ; ರೂ. ೧೦.

ವಿಶ್ವವಿದ್ಯಾಲಯದ ವಾಚನಾಲಯದೊಳಗೆ ; ಅಶೋಕ ಶೆಟ್ಟರ; ಶಾಂತಿಸಾಗರ ಪ್ರಕಾಶನ. ಧಾರವಾಡ ೩. ರೂ. ೧೫.

ಮಹೂವಾ ; ಬಂಜಗೆರೆ ಜಯಪ್ರಕಾಶ ಚರ ಪ್ರಕಾಶನ, ಹಾರೋಹಳ್ಳಿ. ರೂ ೧೦

ಹಾಡ್ಯಾಡಿ ಅಳುತಾವೆ : ಜಿ. ಪರಮೇಶ ಕತ್ತಿಗೆ; ಸಮತಾ ಪ್ರಕಾಶನ, ಹರಿಹರ, ರೂ ೧೦.

ಹಿಡಿಶಾಪ ; ಐ. ಆರ್. ಪೆರುಮಾಳ್: ಕನ್ನಡಕ್ಕೆ ವೀಚಿ: ಚಲನ ಪ್ರಕಾಶನ ಸಹಕಾರಿ, ತುಮಕೂರು ೬; ರೂ. ೨೫.

ಪ್ರೇಮದ ಪುತ್ಥಳಿ : ಸಂ; ನಾಗರಾಜ್ ಮಲ್ಕಿ ಒಡೆಯರ್ ಪ್ರಕಾಶನ, ಹೂವಿನ–ಹಡಗಲಿ, ರೂ. ೫.

ಗಾಜು ; ವಿವಿಧ ಕವಿಗಳು. ಸಂಚಯ, ಬೆಂಗಳೂರು ೨೬; ರೂ. ೮

ಅರಳು ಮೊಗ್ಗು : ಹಾಸನ್ ರಮೇಶ್; ಫ್ರೆಂಡ್ಸ್, ಅಸೋಶಿಯೇಶನ್ ಪ್ರಕಾಶನ, ಬೆಂಗಳೂರು ೯೧; ರೂ. ೧೦.

ಜೀವಗೀತ ; ಕೆ. ಎನ್ ನಾಗರಾಜ ; ಗ್ರಾಮೀಣ ಸಾಹಿತ್ಯ ಪರಿಷತ್ತು, ದೇವರ ಮರಿಕುಂಟೆ; ರೂ. ೧೫.

ಚೂರು ಗಾಜಿನ ಗೋಲಿ : ವಿದ್ಯಾರ್ಥಿಗಳು; ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು: ರೂ. ೫.

ನನ್ನ ಪಾಡಿಗೆ ನಾನು ; ಅಬ್ದುಲ್ ರಶೀದ್! ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು; ರೂ. ೧೫.

ಬಿಸಿ ನೆತ್ತರ ಹನಿ ; ಸಂ-ಪ್ರಭು ಗಂಜಿಹಾಳ. ಎಸ್. ಎಸ್. ಕೆಂಭಾವಿಮಠ; ವಾಲ್ಮೀಕಿ ಪ್ರಕಾಶನ, ಬೆಟಗೇರಿ-ಗದಗ ; ರೂ. ೪.

ಪ್ರತಿಭಾ ಸ್ಪಂದನ : ಸಂ. - ಜಿ. ಪಿ ಚಕ್ರಸಾಲಿ, ಎನ್. ಎಸ್. ಹುಣಸೀಕಟ್ಟಿ. ಪ್ರಭು ಗಂಜಿಹಾಳ; ರೂ. ೫.

ದೇಹವೆಂಬ ವಿಶ್ವ ; ಡಾ. ವಸಂತ ಕುಲಕರ್ಣಿ; ಭುವನೇಶ್ವರಿ ಪ್ರಕಾಶನ, ವಿಜಾಪುರ; ರೂ. ೧೦.

ನಾನೂ ಬರೀಬೇಕಂತೀನಿ ; ಹರೀಶ ಹೂಲಿ. ಆಕೃತಿ ಪ್ರಕಾಶನ, ಅಂಬಿಕಾನಗರ; ರೂ. ೫.

ತುಂಬೆ ಹೂ ; ಕಮಲಾ ಮೂರ್ತಿ; ಕಮಲ್ ಪ್ರಕಾಶನ,ಕೆಸವಿನ ಮನೆ; ರೂ. ೧೫.

ಉತ್ಥಾನ ; ವಿ.ಜಿ ಭಟ್ಟ; ರುಕ್ಮಿಣಿ ಪ್ರಕಾಶನ,ಮುಂಬಯಿ.

ಪ್ರಾರ್ಥನೆ [ಅಂತಿಮ] ; ವಿಜಿ ಭಟ್ಟ: ರುಕ್ಮಿಣಿ ಪ್ರಕಾಶನ, ಮುಂಬಯಿ.

ಪ್ರಥಮ ಚುಂಬನ : ಡಾ. ರಘುವೀರ ಭಟ್ಟ; ರುಕ್ಮಿಣಿ ಪ್ರಕಾಶನ, ಮುಂಬಯಿ

ಪ್ರಸ್ತುತ : ಜೆ. ದಾಜೀಬಾ ; ರವಿಕಿರಣ ಪ್ರಕಾಶನ. ಬಾದಾಮಿ; ರೂ. ೧೦.

ಕೆಂಪು ರೆಕ್ಕೆಯ ಹಕ್ಕಿ ; ಆಂಜನೇಯ ಚಿ. ಜಾಲಿಬೆಂಚಿ; ಪ್ರಕಾಶನ, ರಾಯಚೂರು, ರೂ. ೧೨.

ನೆತ್ತರ ಕಥೆಗಳಿಗೆ ಜೀವ ; ಟಿ, ಎಸ್. ರಾಜೇಂದ್ರ ಪ್ರಸಾದ : ಬಂಡಾಯ ಸಾಹಿತ್ಯ ಸಂಘಟನೆ, ಹೊಸದುರ್ಗ; ರೂ. ೧೨

ಕುಡುಗೋಲು ; ಡಿ. ಬಿ. ಢಂಗ ಸಾಹಿತ್ಯ ಶ್ರೀ ಪ್ರಕಾಶನ, ಧಾರವಾಡ; ರೂ, ೧೫.

ಸಂಪದಾ ; ಲಲಿತಾ ಕೆರಿಮನಿ; ಕವಿರಾಜ ಪಬ್ಲಿಕೇಶನ್, ಲಕ್ಷ್ಮೇಶ್ವರ; ರೂ. ೧೦.

ನಾ ಕವಿ ಅಲ್ಲಾ : ಧನಣೇಂದ್ರ ಕುರಕುರಿ; ಜಾಗೃತಿ ಪ್ರಕಾಶನ; ಶಿರಸಿ; ರೂ. ೨೦.

ಸಮರ್ಪಿತ ; ಎನ್. ಬಾಬು ಕೊಂಡಗೂಳಿ; ಹುಬ್ಬಳ್ಳಿ; ರೂ. ೧೫.

ಮುತ್ತು ಹವಳ ; ಸಂ. ಗುರುಮೂರ್ತಿ ಪೆಂಡಕೂರ, ಕೆ. ವಿರುಪಾಕ್ಷಗೌಡ; ಕ.ಸಾ.ಪ.ಹ. ಬೊಹಳ್ಳಿ; ರೂ. ೧೫.

ಮುಂಪುಸ್ಪರಿ ; ಸಂ. ಧರೆಪ್ಪ ನಿಡೋಣಿ, ನಬಿಲಾಲ ಅಮ್ಮಾಪುರ; ಶ್ರೀಶೈಲ ಕಾಂಬಳೆ; ಶಾಂತರಸ ಪ್ರಕಾಶನ; ಅಮ್ಮಾಪುರ; ರೂ. ೧೫.

ಮಂತ್ರಿಗೀತೆ ; ವೆಂಕಟೇಶ ಕುಲಕರಣಿ; ಜಾಗ್ರತ ಭಾರತ, ಧಾರವಾಡ; ರೂ. ೨.

ಎದ್ದು ಬಾ ; ಎಸ್. ಕೆ. ಪುರೋಹಿತ; ಕಿರಣ ಪ್ರಕಾಶನ, ಧಾರವಾಡ; ರೂ. ೫,

ಅರೆಸತ್ತ ಬದುಕು : ಈರಪ್ಪ ಕಂಬಳಿ; ಚಾರ್ವಾಕ ಪ್ರಕಾಶನ, ಬೆಂಗಳೂರು; ರೂ. ೧೫.

ಭಾವಾಂಜಲಿ ; ಸಿ. ಎಂ ಜೋಶಿ : ನವೀನ ಪ್ರಕಾಶನ. ಗುಳೇದಗುಡ್ಡ; ರೂ. ೧೦

ಮೊದಲ ಹೆಜ್ಜೆಗಳು ; ಸಂಜೀವ ಕುಲಕರ್ಣಿ ; ಶ್ರೀಹರಿ ಪ್ರಕಾಶನ, ಧಾರವಾಡ; ರೂ. ೨೦

ಹೊಸ ಭತ್ತ ; ವಿಷ್ಣು ನಾಯ್ಕ; ಶ್ರೀರಾಘವೇಂದ್ರ ಪ್ರಕಾಶನ, ಅಂಕೋಲಾ; ರೂ. ೧೨

ನೀರು ನೆಲೆ ; ಸೂಗಯ್ಯ ಹಿರೇಮಠ, ನಟರಾಜ ಪ್ರಕಾಶನ, ಸಿಂಗನಹಳ್ಳಿ ರೂ. ೧೦.

ಗಣಿತದ ಕಾವ್ಯಕ್ಕೆ ಶೀರ್ಷಿಕೆಯಾಗುವಾಸೆ ; ಭಾರತಿ ಹಿರೇಮಠ; ವಿವೇಕ ಪ್ರಕಾಶನ. ಹುಬ್ಬಳ್ಳಿ; ರೂ. ೧೦

ನನ್ನ ಕವಿತೆ ನನ್ನ ಹಾಗೆ ; ಎಚ್ ದುಂಡಿರಾಜ್ ; ಲಿಪಿ ಪ್ರಕಾಶನ ಬೆಂಗಳೂರು ರೂ. ೧೫

ಮತ್ತೆ ನನ್ನ ಆಕಾಶ ; ಕೆ ಪಿ. ನಟರಾಜ, ಗೌತಮ ಪ್ರಕಾಶನ, ತುಮಕೂರು, ರೂ. ೨೦.

ಪರಿಮಳ ; ಪಿ. ಕರಿಯಪ್ಪ, ಲಕ್ಕೇನಹಳ್ಳಿ; ರೂ. ೫.

ಕಾಮನಬಿಲ್ಲು ; ಶಿವರಾಮ ಹೆಗಡೆ, ಬ್ಯಾಳಿಗದ್ದೆ ರೂ. ೧೦.

ಅಂತರಂಗದ ದನಿಗಳು : ಸಿದ್ಧರಾಮ ಹೊನ್ಕಲ್; ಜಾಗ್ರತ ಪ್ರಕಾಶನ ಶಹಾಪುರ ರೂ. ೧೦.

ಅಗ್ನಿ ಸೂಕ್ತ : ಟಿ. ಎಸ್ ರಾಮಸ್ವಾಮಿ: ಕಾಮಧೇನು ಪ್ರಕಾಶನ, ಬೆಂಗಳೂರು. ರೂ. ೧೫.

ನೆರೆಬಂದ ನದಿ : ಕೆ. ಎಸ್. ರಾಧಾಕೃಷ್ಣ; ಕಾಮಧೇನು ಪ್ರಕಾಶನ, ಬೆಂಗಳೂರು; ರೂ. ೧೫.

ತಾಜಮಹಲಿನ ಹಾಡು ; ಸುನ್ಯಾ ಮಾರುತಿ; ಸಂಗ್ರಾಮ ಪ್ರಕಾಶನ, ಧಾರವಾಡ; ರೂ. ೧೨.

## ವಿಮರ್ಶೆ–ಸಂಶೋಧನೆ

ಶಿಷ್ಟ ಪರಿಶಿಷ್ಟ ; ಡಾ ಪುರುಷೋತ್ತಮ ಬಿಳಿಮಲೆ; ಮರಿಪಂ ಪ್ರಕಾಶನ; ಮಂಗಳ ಗಂಗೋತ್ರಿ (ದ. ಕ ); ರೂ. ೪೫.

ಸಾಹಿತ್ಯ ಮತ್ತು ಸಮೂಹ ಪ್ರಜ್ಞೆ ; ಸಂ–ಸಿ. ಎಂ. ಮಹದೇವ, ಗುಡಿಹಳ್ಳಿ ನಾಗರಾಜ, ಎಲ್. ರಮೇಶ; ಬಂಡಾಯ ಸಾಹಿತ್ಯ ಸಂಘಟನೆ, ಚಿತ್ರದುರ್ಗ ರೂ. ೨೫.

ಕರ್ನಾಟಕ ಸಂಸ್ಕೃತಿ ಪರಂಪರೆ (ಭಾಗ ೧) : ಎಸ್. ಎಸ್. ಹಿರೇಮಠ; ಸಮತಾ ಪ್ರಕಾಶನ, ಹರಪನಹಳ್ಳಿ ರೂ. ೨೦.

# ಈ ಸಂಚಿಕೆಯ ಲೇಖಕರು

**ಹುರುಕಡ್ಲಿ ಶಿವಕುಮಾರ** ಬಾಚಿಗೊಂಡನಹಳ್ಳಿ (ಬಳ್ಳಾರಿ) ೫೮೩೨೧೨
**ಜ. ಹೊ. ನಾರಾಯಣ ಸ್ವಾಮಿ** ೨೦೬೪/ಎ. ಮಾನವ, ಉತ್ತರ ಬಡಾವಣೆ ಹಾಸನ ೫೭೩.೨೦೧
**ಜಿ. ಎಚ್. ನಾಯಕ** ೪೮೭. ಪ್ರೀತಿ, ಕುವೆಂಪುನಗರ, ಮೈಸೂರು ೫೭೦೦೨೩
**ಡಾ. ಬಸವರಾಜ ಸಾದರ** ಆಕಾಶವಾಣಿ. ರಾಜಭವನ ರಸ್ತೆ ಬೆಂಗಳೂರು ೧
**ಹರಿಹರಪ್ರಿಯ** (ಸಾತವಲ್ಲಿ ವೆಂಕಟವಿಶ್ವನಾಥ) ೫೧-ಎ, ೧೧ ನೇ ಕ್ರಾಸ್, ೧ನೇ ಮೇನ್ ರಾಜಾಜಿನಗರ. ಬೆಂಗಳೂರು ೫೬೦೦೧೦
**ವಿಲಿಯಂ** ೧೫/೧೩, ೨ನೇ ಕ್ರಾಸ್, ನೆಹರು ನಗರ, ಸಾಗರ ೫೭೭೪೦೧
**ಗೌರೀಸುತ ಗಣೇಶ** ಸಂಶೋಧನ ವಿದಾರ್ಥಿ, ಕನ್ನಡ ವಿ. ವಿ ಹಂಪಿ ೫೮೩೨೭೬
**ಸೋಮಣ್ಣ ಹೊಂಗೆಹಳ್ಳಿ** ಸಂಶೋಧನ ವಿದ್ಯಾರ್ಥಿ. ಕ.ಅ. ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು ೫೭೦೦೦೬
**ವೈ. ಬಿ. ಹಿಮ್ಮಡಿ** ಕನ್ನಡ ಪ್ರಾಧ್ಯಾಪಕ, ಆರ್ಟ್ಸ ಮತ್ತು ಸೈನ್ಸ್ ಕಾಲೇಜು ರಾಯಬಾಗ ೫೯೧೩೧೭
**ಎಂ. ಬಿ. ಅಡ್ನೂರ** ಕ್ರಾಸ್‌ಬಾರ ಎಕ್ಸ್‌ಚೇಂಜ್, ಹುಬ್ಬಳ್ಳಿ ೫೮೦೦೨೦
**ಅಮರೇಶ ಕುಂಬಾರ** ಗ್ರಂಥಪಾಲಕ, ಎ. ಸಿ. ಬಿ. ಕಾಲೇಜು ಲಿಂಗಸುಗೂರು ೫೮೪೧೨೨
**ಅಯ್ಯಪ್ಪಯ್ಯ ಹುಡಾ** ಟಿ. ೬/೩೦. ಆರ್‌ಟಿಪಿಎಸ್ ಕಾಲನಿ ಶಕ್ತಿನಗರ ೫೮೪೧೭೦
**ಗಣಪತಿ ದಿವಾಣ** ಎಡನಾಡು (ಮಯಾ; ಕುಂಬಳೆ-ಕಾಸರಗೋಡು) ೬೭೧೩೨೧
**ಚನ್ನಪ್ಪ ಕಟ್ಟಿ** ಇಂಗ್ಲಿಷ್ ಪ್ರಾಧ್ಯಾಪಕ, ಜಿ ಪಿ.ಪಿ. ಕಾಲೇಜು ಸಿಂದಗಿ–೫೮೬೧೨೮
**ಸಾ. ದಯಾ** ೧೬, ದೇವಜೀ ಜಗನ್ ಎಸ್ಟೇಟ, ಗಾಂದೇವಿ ರೋಡ ಭಾಂಡೂಪ ಮುಂಬಯಿ ೪೦೦೦೭೮
**ರಾಜಶೇಖರ ಪಾಟೀಲ** ಹತಗುಂದಿ, ಭುಕೂರು (ಗುಲಬರ್ಗಾ) ೫೮೫೨೨೭
**ಎಂ. ಎಚ್. ಲಕ್ಷ್ಮೀನರಸಮ್ಮ** ೬೮೯/೧, ಶಂಕರ ಕೃಪ, ೧೦-ಎ ಮೇನ್ ೪ನೇ ಬ್ಲಾಕ್, ಜಯನಗರ, ಬೆಂಗಳೂರು ೫೬೦೦೧೧
**ಲತಾ ರಾಜಶೇಖರ** ೧೬, ಟೆಂಪಲ್ ರಸ್ತೆ, ಜಯಲಕ್ಷ್ಮೀಪುರ ಮೈಸೂರು ೧೨
**ವಾಸುದೇವ ನಾಡಿಗ** ೫ನೇ ಕ್ರಾಸ್, ಎಸ್‌ಬಿಎಂ ಹತ್ತಿರ, ರವೀಂದ್ರ ನಗರ ಶಿವಮೊಗ್ಗ ೫೭೭೨೦೧
**ವಿದ್ಯಾಧರ ಮುತಾಲಿಕ ದೇಸಾಯಿ** ಮ. ನಂ. ೧೦, ಮೊದಲ ಮಹಡಿ, ದುರ್ಗಾ

ಸಿಕೇತನ ನಾಯಕ ಬಿಲ್ಡಿಂಗ್, ರೇಲ್ವೆಸ್ಟೇಶನ್ ಹತ್ತಿರ
ಠಾಕುರ್ಲಿ (ಪೂ) ೪೨೧ ೨೦೬
**ಶೇಖರ ಲದವಾ** ಲದವಾ ಚಾಳ, ಗಂಗಾಪೂರ ಪೇಟ, ಗದಗ ೫೮೨೧೦೧
**ಶ್ರೀಮತಿ** (ಟಿ. ಶ್ರೀನಿವಾಸ) ನಂ. ೩೭, ೩ನೇ ಕ್ರಾಸ್, ದೇವೇಗೌಡ ಬಡಾವಣೆ
ಆಡುಗೋಡಿ. ಬೆಂಗಳೂರು ೫೬೦೦೩೦
**ಎ. ಸದಾನಂದ ಹೆಬ್ಬಾರ** ನಿವೃತ್ತ ಹೆಡ್‌ಮಾಸ್ಟರ. ಐರೋಡಿ (ದ-ಕ-)೫೭೬೨೩೬
**ಬಿ. ಕೆ. ಸರಸ್ವತಿ ಜಡ್ಡಿಗದ್ದೆ** ಕೇರಾಫ್ ವಿಶಾಲ ಕರ್ನಾಟಕ, ಹುಬ್ಬಳ್ಳಿ ೫೮೦೦೨೦
**ಅಬ್ದುಲ್ ರಹೀಮ ಗೋವಾಳ** ಗೋವಾಳ (ಯರಮರಸ–
ರಾಯಚೂರು) ೫೮೪೧೩೪
**ಅಂಬಾದಾಸ ವಡೆ** ಜೈನ ಪೇಟ, ಬಾಗಲಕೋಟ ೫೮೭೧೦೧
**ಜೆ. ಕೆ. ಎಸ್ಸಾರ್** (ಜೆ. ಕೆ. ಶ್ರೀನಿವಾಸರಾವ) ಪ್ರಬಂಧಕ ತುಂಗಭದ್ರಾ
ಗ್ರಾಮೀಣ ಬ್ಯಾಂಕ್. ಆನಾಹೊಸೂರ (ಲಿಂಗಸುಗೂರ-ರಾಯಚೂರ)
**ಕಮಲಾ ಮೂರ್ತಿ** ನಂ. ೧೩೪, ೪ನೇ ಅಡ್ಡರಸ್ತೆ, ಈದಗಾ ಮೊಹಲ್ಲಾ
ತುಮಕೂರು ೫೭೨೧೦೧
**ಕವಿಕಂಪ, ಗಡಗ** ಕೇರಾಫ್ ಸ.ಮ. ಶಿರಹಟ್ಟಿ. ಸ್ಮಾರ್ಟ ಪ್ರಿಂಟರ್ಸ್
ಕಾಗದಗೇರಿ ರೋಡ. ಗದಗ ೫೮೨೧೦೧
'ಗ್ರೀಷ್ಮ (ಕೆ ವಿ ರಾಜಲಕ್ಷ್ಮಿ) ೮/೩, ಶ್ರೀರಾಮ, ೧೧ನೇ ಅಡ್ಡರಸ್ತೆ, ಈಜು
ಗೊಳದ ಬಡಾವಣೆ, ಮಲ್ಲೇಶ್ವರ, ಬೆಂಗಳೂರು ೫೬೦೦೦೩
**ಬಿ. ನರಸಪ್ಪ** ಸೂಪರಿಂಟೆಂಡೆಂಟ್ ಆಫ್ ಪೋಲಿಸ (ಸಿ.ಓ ಡಿ.), ೫ನೇ ಮಹಡಿ
ಕಾವೇರಿ ಕಟ್ಟಡ, ಬೆಂಗಳೂರು ೫೬೦೦೦೯
**ಪ್ರಕಾಶ ಬೆಳಕೂಡ** ಸಿಂಡಿಕೇಟ ಬ್ಯಾಂಕ ಹತ್ತಿರ, ಮೂಡಲಗಿ ೫೯೧೩೧೨
**ಡಾ ಎಸ್. ವಿ. ಪ್ರಭಾವತಿ** ಕನ್ನಡ ಪ್ರಾಧ್ಯಾಪಕಿ, ಭಾ.ಸಂ.ವಿ ಮಹಿಳಾ
ಕಾಲೇಜು, ವಿಜಯನಗರ, ಬೆಂಗಳೂರು ೫೬೦೦೪೦
**ಬಿ.ವಿ.ಜಿ. ಪ್ರಸಾದ** ನಂ. ೬, ಆಯಿಲ್ ಮಿಲ್ ರಸ್ತೆ, ಅಗ್ರಹಾರ,
ತುಮಕೂರು ೫೭೨೧೦೧
**ಬಿ. ಎ. ಪಾರ್ವತಿ ಅಪ್ಪಣ್ಣಪ್ಪಯ್ಯ** ಚಿಕ್ಕಪೇಟೆ, ವಿರಾಜಪೇಟ ೫೭೧೨೧೮
**ಪೂರ್ಣಿಮಾ ಲಾಗದಮನೆ** ೪೯, ೨ನೇ ಮಹಡಿ. ೩ನೇ ಕ್ರಾಸ್, ಜೆ.ಬಿ. ಕಾವಲ್
ಗಣೇಶ ಬ್ಲಾಕ್, ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು ೫೬೦೦೮೬.
**ಡಾ. ಬಸವಪ್ರಭು ಪಾಟೀಲ** ಕಲ್ಯಾಣ ವೈದ್ಯಾಲಯ, ಮಾನವಿ ೫೮೪೧೨೩
**ಭೀಷ್ಮ ತಡಸ** (ಮಹೇಶ ದೇಸಾಯಿ, ಡಿ.ಎಂ.ಇ.) ತಡಸ ೫೮೧೨೧೨
**ಮಲ್ಲಿಕ್ ಟಿ. ಬಿ.** ಪಿ.ಎಚ್,ಸಿ. ಕಣಗಲಾ (ಹುಕ್ಕೇರಿ–ಬೆಳಗಾವಿ)
**ಡಾ. ಬಿ. ಎಸ್. ಮಂಜುಳಾದೇವಿ** 'ಮಗಂ' ನಂ. ೯೬೦, ೩೮ನೇ ಕ್ರಾಸ್,

೨೪ನೇ ಮೇನ್. ೪ನೇ ಟಿ-ಬ್ಲಾಕ್. ಜಯನಗರ, ಬೆಂಗಳೂರು ೫೬೦೦೪೧

**ಮ. ಶ್ರೀ. ಮುರಳೀಕೃಷ್ಣ** ನಂ. ೧೦೦, ೨ನೇ ಅಡ್ಡರಸ್ತೆ. ಗವೀಪುರಂ ಬಡಾವಣೆ ಬೆಂಗಳೂರು ೫೬೦೦೧೯

**ಆರ್. ಸುಧಾ** ಪ್ರಥಮ ಎಂ. ಎ.. ಕುವೆಂಪು ವಿಶ್ವವಿದ್ಯಾಲಯ, ಬಿ. ಆರ್ ಪ್ರಾಜೆಕ್ಟ್ ೫೭೭೧೧೫

**ಪಂ, ರಾ. ಸುಧೀಂದ್ರಕುಮಾರ** ಇಂಡಿಯನ್ ಬ್ಯಾಂಕ್, ಎಚ್. ಆರ್. ಜಿ. ಸರ್ಕಲ್, ಬಳ್ಳಾರಿ ೫೮೩೧೦೧

**ಸುಮ ಜಿ. ಭಟ್** ಕೇರಾಫ್ ಗಣಪತಿ ಭಟ್ ಪಿ.ವಿ., ಉಳ್ಳಾಲ ಮನೆ, ಕುರ್‍ಯ, ಆರ್ಯಾಪು (ದ. ಕ.) ೫೭೪೨೧೦

**ಹಾ. ಉ. ಸೌರಬ** ಶ್ರೀರಂಗನಾಥಸ್ವಾಮಿ ನಿಲಯ, ಅಗಸರ ಬೀದಿ, ಹಳೇನಗರ ಭದ್ರಾವತಿ ೫೭೭೩೦೧

**ಹೆಚ್. ಎನ್. ಸೋಮಶೇಖರ** ಪ್ರ ದ.ಸ., ರಾಷ್ಟ್ರೀಯ ವಾಣಿಜ್ಯ ಕಾಲೇಜು, ಶಿವಮೊಗ್ಗ ೫೭೭೨೦೧

**ವಸಂತ ಮಲ್ಲಾಪುರ** ಶಿಕ್ಷಕರು, ಗಂ. ಮ. ಸ. ಪ್ರಾ. ಶಾಲೆ, ನರಗುಂದ ೫೮೨೨೦೭

**ವಿಜಯಕಾಂತ ಪಾಟೀಲ** ರೂಂ, ನಂ. ೬.ರೇಣುಕಾ ನಿವಾಸ, ಮಿಚಿಗನ್ ಕಾಂಪೌಂಡು. ಸಪ್ತಾಪುರ. ಧಾರವಾಡ ೫೮೦೦೦೧

**ವಿಜಯೇಂದ್ರ ಕುಲಕರ್ಣಿ** ಮಳ್ಳಿ (ಗುಲಬರ್ಗಾ) ೫೮೫೩೨೫

**ವಿಶ್ವನಾಥ ಬದಿಕಾನ** ಸಂಶೋಧನ ವಿದ್ಯಾರ್ಥಿ. ಕನ್ನಡ ವಿ.ವಿ. ಹಂಪಿ ೫೮೩೨೭೯

**ವೀಣಾ ಬನ್ನಂಜೆ** ಈಶಾವಾಸ್ಯಂ. ಅಂಬಲಪಾಡಿ, ಉಡುಪಿ(ದ.ಕ.) ೫೭೬೧೦೩

**ಶಿವಕುಮಾರ ಕಲ್ಲೂರ** ಸಮಾಜಶಾಸ್ತ್ರ ಉಪನ್ಯಾಸಕ, ಎಸ್. ವಿ. ಕಾಲೇಜು ಕಮ್ಮತ್ತ ಹಳ್ಳಿ (ಬಳ್ಳಾರಿ) ೫೮೩೧೨೫

**ಶಿವಪ್ರಸಾದ ಎಲ್. ಹಾದಿಮನಿ** ಸೋಮಶ್ರಾಚಾರ ಮಠದ. ಸ್ಟೇಶನ್ ಹತ್ತಿರ ಕೊಪ್ಪಳ ೫೮೩೨೩೧

**ಶ್ರೀನಿವಾಸ ಜಾಲವಾದಿ** ಕೇರಾಫ್ ಸ್ವಾಮಿರಾವ್‌ಮಾಚಾರ್ಯ, ಗಾಂಧಿಚೌಕ ಬಳಿ ಸುರಪುರ (ಗುಲಬರ್ಗಾ) ೫೮೫೨೨೪

---

**ಪ್ರಿಯ ಚಂದಾದಾರರೇ**

ಜನವರಿ ೧೯೯೬ ರಿಂದ ಸಂಕ್ರಮಣವನ್ನು, ಯಾರಿಗೆ ಬೇಕೋ ಅವರಿಗೆ ಮಾತ್ರ ಕಳಿಸಲಾಗುವದು. ಜನವರಿ ೧೦ ರೊಳಗಾಗಿ ನಿಮ್ಮ ಬೇಕು/ಬೇಡಗಳನ್ನು ಕಾರ್ಡಿನಲ್ಲಿ ತಿಳಿಸಿರಿ. ಚಂದಾ ಕಳಿಸಿರಿ.

---

# ಕರ್ನಾಟಕ–ನನಸಾದ ಕನಸು

## 'ಆಶೋತ್ತರಗಳ ಸಾಧನೆಯಲ್ಲಿ ಶಿಖರಪ್ರಾಯ'

**ಸಂದೇಶ :**

ರಾಜ್ಯೋತ್ಸವದ ಶುಭ ದಿನದಂದು ಕರ್ನಾಟಕದ ಸಮಸ್ತರಿಗೂ ಸುಖ ಸಂತೋಷಗಳನ್ನು ಆಶಿಸಲು ನನಗೆ ಅತ್ಯಂತ ಆನಂದವಾಗುತ್ತದೆ. ರಾಜ್ಯದ ಬಡವರ, ದುರ್ಬಲ ಹಾಗೂ ಹಿಂದುಳಿದ ವರ್ಗಗಳವರ ಏಳಿಗೆಗೆ ಹಲವಾರು ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸಿ, ಅನುಷ್ಠಾನಗೊಳಿಸುವುದೇ ನಮ್ಮ ಸರ್ಕಾರದ ಪ್ರಥಮಾದ್ಯತೆ. ಇದನ್ನು ತಾವೆಲ್ಲರೂ ಬೆಂಬಲಿಸಿದ್ದೀರಿ. ಕರ್ನಾಟಕದ ಶ್ರೇಷ್ಠ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿ ಬೆಳೆಸಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು ಇದು ನನಗೆ ಅತೀವ ಸಂತೋಷವನ್ನು ಉಂಟುಮಾಡಿದ್ದು, ಈ ದಿನದಂದು ತಮ್ಮೆಲ್ಲರ ಪ್ರೀತಿ ವಿಶ್ವಾಸಕ್ಕೆ ನಾನು ಧನ್ಯವಾದಗಳನ್ನು ಸಲ್ಲಿಸುತ್ತಾ ನಮ್ಮ ರಾಜ್ಯಕ್ಕೆ ಉತ್ತಮ ಭವಿಷ್ಯ ರೂಪಿಸುವಲ್ಲಿ ಮುಂದೆಯೂ ತಮ್ಮ ಪ್ರೀತಿ, ಆದರ ಹಾಗೂ ಬೆಂಬಲವನ್ನು ನಿರೀಕ್ಷಿಸುತ್ತೇನೆ. "ಜೈ ಕರ್ನಾಟಕ"

**ಎಸ್. ಬಂಗಾರಪ್ಪ**

ಮುಖ್ಯ ಮಂತ್ರಿಗಳು.

ಕರ್ನಾಟಕ ಸದಾ ಉನ್ನತವಾದ ಆಕಾಂಕ್ಷೆ, ಮಹೋನ್ನತ ಕನಸುಗಳು ಹಾಗೂ ಪರಿಪೂರ್ಣ ಸಾಧನೆಗಳ ತವರೂರು. ಕನ್ನಡಿಗರು ಬಹು ಹಿಂದಿನಿಂದಲೂ ವಿಶಾಲ ಹೃದಯ ಹಾಗೂ ದೃಢ ಮನಸ್ಸಿನಿಂದ ಕರ್ನಾಟಕವನ್ನು ಭಾರತದ ಮುಕುಟ ಮಣಿಯನ್ನಾಗಿಸಲು ಶ್ರಮಿಸಿದರು. ಈ ಅರ್ಥಪೂರ್ಣ ಸಂಪ್ರದಾಯವನ್ನು ಉಳಿಸಿಕೊಂಡು ಇನ್ನಷ್ಟು ಉತ್ತಮಗೊಳಿಸುವಲ್ಲಿ ಪ್ರಸ್ತುತ ಸರ್ಕಾರ ಮುಖ್ಯಮಂತ್ರಿ ಶ್ರೀ ಎಸ್. ಬಂಗಾರಪ್ಪನವರ ನೇತೃತ್ವದಲ್ಲಿ ರಾಜ್ಯದ ಜನತೆಯ ಬದ್ಧತೆ ಮತ್ತು ಬೆಂಬಲದಿಂದ ದೃಢವಾದ ಹೆಜ್ಜೆ ಇಟ್ಟಿದೆ.

ಶ್ರೇಷ್ಠ ಪರಂಪರೆಯ ಪೋಷಣೆಗೆ ಲಲಿತಕಲಾ ವಿಶ್ವವಿದ್ಯಾಲಯ : ಮೈಸೂರಿನಲ್ಲಿ ಲಲಿತಕಲೆಗಳ ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಸರ್ಕಾರ ಈಗಾಗಲೇ ನಿರ್ಧರಿಸಿದೆ. ಈ ವಿಶ್ವವಿದ್ಯಾಲಯವು ಜಾನಪದ, ಶಿಲ್ಪಕಲೆ, ಚಿತ್ರರಚನೆ, ಸಂಗೀತ ಮುಂತಾದ ರಂಗಗಳಲ್ಲಿ ಆಸಕ್ತ ಕಲಾವಿದರಿಗೆ ಹೆಚ್ಚಿನ ಉತ್ತೇಜನ ಹಾಗೂ ಸೂಕ್ತ ತರಬೇತಿ ನೀಡಲಿದೆ.

**ಕನ್ನಡಭವನ:** ಕನ್ನಡ ಭಾಷೆ ಹಾಗೂ ಸಂಸ್ಕೃತಿಯನ್ನು ಉಳಿಸಿ ಬೆಳೆಸುವ **ಪ್ರತಿಷ್ಠಿತ ಕನ್ನಡ ಭವನದ ನಿರ್ಮಾಣಕ್ಕೆ ಸರ್ಕಾರ ಮಂಜೂರಾತಿ ನೀಡಿದೆ.**

ಬಂಡಾಯ ಮನೋಧರ್ಮ : ಎಸ್ ವೆಂಕಟವಿಶ್ವನಾಥ ; ಪ್ರಜಾ ಸಾಹಿತ್ಯ ಪ್ರಕಾಶನ. ಬೆಂಗಳೂರು, ರೂ. ೧೫.

ಕರ್ನಾಟಕ ದಲಿತ ಚಳುವಳಿ ಮತ್ತು ಅಂಬೇಡ್ಕರ್ ; ಚಂಡಾಳ; ಚೈತ್ರ ಪ್ರಕಾಶನ, ಚಿಕ್ಕತಿರುಪತಿ (ಕೋಲಾರ); ರೂ. ೩೫.

ಮಾರ್ಕ್ಸ್ ಸಾಹಿತ್ಯ ಸಮಾಜ, ದರ್ಶನ : ಡಿ. ಎಸ್. ನಾಗಭೂಷಣ, ರಾಘವೇಂದ್ರ ಪಾಟೀಲ . ಸ. ಉಷಾ; ಸಂವಾದ ಪ್ರಕಾಶನ ಮಲ್ಲಾಡಿಹಳ್ಳಿ; ರೂ. ೬೦.

ಸಂಶೋಧನ ಸ್ವರೂಪ. ಡಾ. ಬಿ.ವಿ ಶಿರೂರ; ಅನ್ನಪೂರ್ಣ ಪ್ರಕಾಶನ. ಹುಬ್ಬಳ್ಳಿ ರೂ. ೩೦.

ಜನಪದ ಸುತ್ತಮುತ್ತ ; ವಾಮನ ನಂದಾವರ; ಪ್ರಜಾಬಂಧು ಪ್ರಕಾಶನ ಮಂಗಳೂರು; ರೂ. ೩೦

ಶಿವರಾಮ ಕಾರಂತ– ಎರಡು ಅಧ್ಯಯನಗಳು ಟಿ ಪಿ. ಅಶೋಕ; ಅಕ್ಷರ ಪ್ರಕಾಶನ, ಸಾಗರ; ರೂ. ೪೦

ಸೀರ್ಪಣಿ : ಯು. ರಾಘವೇಂದ್ರರಾವ; ಶ್ರೀಲಕ್ಷ್ಮಿ ಪ್ರಕಾಶನ. ಹೊಸಪೇಟೆ ; ರೂ. ೧೫

ಭಾರತ ಸಿಂಧೂರಶ್ಮಿ – ವಸ್ತು ವಿಶ್ಲೇಷಣೆ : ವೈ.ವೈ ಬೆಟಗೇರಿ ಜೆ.ಬಿ. ಪಬ್ಲಿಕೇಶನ್ ಗದಗ; ರೂ. ೫.

ಬಹುಮಾನಿತ ಲೇಖನಗಳು ; ಪ್ರ; ಕನ್ನಡ ಸಂಘ, ಕ್ರೈಸ್ತ ಕಾಲೇಜು, ಬೆಂಗಳೂರು

ಉತ್ತರ ಕರ್ನಾಟಕದ ಜನಪದ ಒಡಪುಗಳು; ಡಾ ದಸ್ತಗೀರ ಅಲ್ಲೀಭಾಯಿ; ಭಾವೈಕ್ಯ ಸಾಹಿತ್ಯ ಪ್ರಕಾಶನ. ಹುಬ್ಬಳ್ಳಿ ರೂ. ೧೮.

ಕನಕದಾಸರು ಬೇಡ ಜನಾಂಗದವರು : ದೇವೇಂದ್ರ ಮಾಧವನವರ; ಚಾಲುಕ್ಯ ಪ್ರಕಾಶನ, ಜಾಲಿಹಾಳ ರೂ. ೪.

ಸಮರಸ : ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು; ತರಳಬಾಳು ಪ್ರಕಾಶನ. ಸಿರಿಗೆರೆ; ರೂ. ೧೮.

ಸಮಕಾಲೀನತೆ ವಚನ ಸಾಹಿತ್ಯ : ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು; ತರಳಬಾಳು ಪ್ರಕಾಶನ, ಸಿರಿಗೆರೆ; ರೂ. ೧೬.

ರಾಮ ಅಳುತ್ತಿದ್ದಾನೆ : ಡಾ। ಹಿ. ಶಿ. ರಾಮಚಂದ್ರೇಗೌಡ; ವಿಚಾರ ಪ್ರಕಾಶನ, ಬೆಂಗಳೂರು; ರೂ. ೨೦.

ಕನ್ನಡ ಸಾಹಿತ್ಯದಲ್ಲಿ ದ್ರೌಪದಿ : ಡಾ। ಎಸ್. ಎ. ಪ್ರಭಾವತಿ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು; ರೂ. ೩೧.

ಜ್ಞಾನ ಷಟ್‌ಸ್ಥಲಸಾರ : ಸಂ– ಡಾ। ವೀರಣ್ಣ ರಾಜೂರ; ವೀರಶೈವ ಅಧ್ಯಯನ ಸಂಸ್ಥೆ, ಗದಗ; ರೂ. ೩೫.

ವಚನ ಸಂಕಲನ ಸಂಪುಟ (೪) : ಸಂ. ಎಂ. ಎಂ. ಕಲಬುರ್ಗಿ ಮುಂ.; ವೀರಶೈವ ಅಧ್ಯಯನ ಸಂಸ್ಥೆ, ಗದಗ; ರೂ. ೪೦.
ವಚನ ಚಳುವಳಿ : ಡಾ। ಬಸವರಾಜ ಸಬರದ; ಪಲ್ಲವಿ ಪ್ರಕಾಶನ, ಗುಲಬರ್ಗಾ; ರೂ. ೪೦.
ಮರ್ಯಾದೆಯ ಮುಸುಕಿನಲ್ಲಿ : ಹೇಮಾ ಪಟ್ಟಣಶೆಟ್ಟಿ; ಅನನ್ಯ ಪ್ರಕಾಶನ, ಧಾರವಾಡ; ರೂ. ೨೪.
ವಚನ ಸಂಕಲನ ಸಂಪುಟ (೫) : ಸಂ-ವೈ. ಸಿ. ಭಾನುಮತಿ; ವೀರಶೈವ ಅಧ್ಯಯನ ಸಂಸ್ಥೆ. ಗದಗ; ರೂ. ೧೦

## ನಾಟಕ

ಎಲ್ಲಮ್ಮನ ಆಟ : ಸಂ-ಚಂದ್ರಗೌಡ ಕುಲಕರ್ಣಿ: ಸಂಗಾತಿ ಪ್ರಕಾಶನ ಕಡದಳ್ಳಿ; ರೂ. ೨೪.
ಬ್ರಹ್ಮಚಾರಿ : ಡಿ. ಲಿಂಗಯ್ಯ: ದಿನಕರ ಪ್ರಕಾಶನ. ಬೆಂಗಳೂರು ೮೫: ರೂ. ೧೦.
ಯಾರಿಗೂ ಹೇಳೋಣ ಬ್ಯಾಡ : ವ್ಯಾಸ ದೇಶಪಾಂಡೆ; ಸಂಪದಾ ಪ್ರಕಾಶನ, ಚಿತ್ರದುರ್ಗ; ರೂ. ೧೬.
ನರಭಕ್ಷಕರು ಅರ್ಥಾತ್ ರೈತರ ಗೋಳು; ಎನ್. ಎಂ. ಕಂಠಿ; ಅಮರ ಸಾಹಿತ್ಯ ಪ್ರಕಾಶನ. ಚಡಚಣ; ರೂ. ೨೦.
ಬೆಡಗಿನ ಬಾಳು : ಶಿವರಾಮ ಹೆಗಡೆ ಬಾಳೆಗದ್ದೆ; ರೂ. ೧೦.

## ಸಣ್ಣ ಕಥೆ-ಕಾದಂಬರಿ

ಪರಂಪರೆಯ ಪತನ : ಎಸ್. ಎಚ್. ವಿರೂಪಾಕ್ಷ ರಾಜಯೋಗಿ; ಪಡಿಯರವಕ್ಕಿ ಪ್ರಕಟನಾಲಯಂ, ಕೃಷ್ಣರಾಜಪೇಟೆ; ರೂ. ೫೦.
ಅಸಹಾಯಕರು (೨ನೇ ಮು) : ಡಿ. ಲಿಂಗಯ್ಯ. ದಿನಕರ ಪ್ರಕಾಶನ, ಬೆಂಗಳೂರು ೮೫; ರೂ ೩೦.
ತಲೆಮಾರಿನ ಹಿಂದೆ : ಸಿಂಪಿ ಲಿಂಗಣ್ಣ : ಶ್ರೀ ಅರವಿಂದ ಗ್ರಂಥಾಲಯ, ಚಡಚಣ ; ರೂ.೪೦.
ದೇವದಾಸಿ : ದು. ನಿಂ ಬೆಳಗಲಿ : ವಿವೇಚನಾ ಪ್ರಕಾಶನ, ಅಥಣಿ ; ರೂ.೨೫.
ಹೆಜ್ಜೆಗಳು : ಸಂ-ಗುರುಮೂರ್ತಿ ಪೆಂಡಕೂರು : ಕ ಸಾ. ಪ. ಹ. ಬೊ. ಹಳ್ಳಿ; ರೂ. ೪೦.
ಮತ್ತೆ ಬರೆದ ಕತೆಗಳು : ನೇಮಿಚಂದ್ರ: ಶ್ರೀ ಪ್ರಕಾಶನ. ಬೆಂಗಳೂರು; ರೂ.೩೦.
ಆಕಾಶಕ್ಕೆ ನೀಲಿ ಪರದೆ : ಬೋಳುವಾರು ಮಹಮದ್ ಕುಂಞ; ಕಾಮಧೇನು ಪ್ರಕಾಶನ, ಬೆಂಗಳೂರು; ರೂ. ೨೪.

## ಇತರ

ಚಾರ್ವಾಕ : ವೆಂಕಟಯ್ಯ ಅಪ್ಪಗೆರೆ ; ಬಯಲು ಸೀಮೆ ಪ್ರಕಾಶನ, ಚನ್ನಪಟ್ಟಣ; ರೂ ೨೦.

ಮಹಾತ್ ಸತ್ಯಾಗ್ರಹ : ಸಿ.ಕೆ. ಮಹೇಶ; ವಿಮೋಚನಾ ಪ್ರಕಾಶನ, ಚಿತ್ರದುರ್ಗ ; ರೂ. ೧೫.

ಟಾಯನಬಿ ವಿಚಾರಧಾರೆ : ಅಣ್ಣಪ್ಪ ಮಟ್ಟೀಕಲ್ಲಿ : ಡೆ. ಚನ್ನಬಸಪ್ಪ ಪ್ರಾಥಮಿಕ ಶಿಕ್ಷಣ ಪ್ರತಿಷ್ಠಾನ, ಧಾರವಾಡ ; ರೂ. ೫.

ನೌಕರನ ಬೇಡಿಕೆಗಳು ಮತ್ತು ಆಡಳಿತ ಸುಧಾರಣೆ : ಎಂ. ಎ. ಪಾಟೀಲ; ವೈ. ೫, ವಿಶ್ವೇಶ್ವರಯ್ಯನಗರ, ಬೆಳಗಾವಿ, ರೂ.೧೦,

ಕಾವೇರಿ – ವಿವಾದದ ಜಲ ಅಥವಾ ವಿಭೇದದ ಬಾಲ ; ಕರ್ನಾಟಕ ವಿಮೋಚನಾ ರಂಗ ರೂ. ೪.

ಕಾವೇರಿ ಕಿಚ್ಚು : ಕರ್ನಾಟಕ ವಿಮೋಚನಾ ರಂಗ; ರೂ. ೩.

ಪ್ಲೇಟೊ : ಎಚ್. ಜಿ. ದೇವೂರ ; ಶ್ರೀ ಮಲ್ಲಿಕಾರ್ಜುನ ಪಬ್ಲಿಶ್‌ರ್ಸ್, ಹುಬ್ಬಳ್ಳಿ ; ರೂ. ೧೦.

ಬಸವಣ್ಣತನದ ಎರಡು ರೀತಿಗಳು : ಲಿಂಗಣ್ಣ ಸತ್ಯಂಪೇಟೆ, ಅಗ್ನಿ ಅಂಕುರ ಪ್ರಕಾಶನ, ಶಹಾಪುರ ; ರೂ.೧೫.

ಜಗಳಗಂಟರ ಜಗತ್ತು : ಲಿಂಗಣ್ಣ ಸತ್ಯಪೇಟೆ ; ಅಗ್ನಿ ಅಂಕುರ ಪ್ರಕಾಶನ, ಶಹಾಪುರ ; ರೂ. ೨೦.

ನೆನಪುಗಳು ಸಾಯುವದಿಲ್ಲ (ಹಾವನೂರು ವಿಚಾರಧಾರೆ) : ಸಂ– ಆರ್. ರಾಜಪ್ಪ ದಳವಾಯಿ : ವೈಚಾರಿಕ ಪುಸ್ತಕ ಮಾಲೆ, ಶಿವನಿ ; ರೂ. ೫೦.

ಮಾನವ ಜ್ಯೋತಿ : ಸುರೇಶ ವಿ. ಕಟಗಿ : ಸುವಿಕ ಪ್ರಕಾಶನ, ಧಾರವಾಡ : ರೂ. ೧೨

ಬಸವೇಶ್ವರ-ಅಂಬೇಡ್ಕರ : ದೇಜಗೌ ; ಬಸವಧರ್ಮ ಪ್ರಸಾರ ಸಂಸ್ಥೆ, ಭಾಲ್ಕಿ: ರೂ.೨೫.

ವಿಧಾನ ಸಭೆಯಲ್ಲಿ ರೈತಸಂಘ : ಕ. ರಾ. ರೈತ ಸಂಘ, ಶಿವಮೊಗ್ಗ: ರೂ. ೨೦.

ಲೋಹಿಯಾ : ಬಿ. ಎಂ. ಹನೀಫ, ದೇವಗಿರಿ, ಹಿಂದಿ ಮಾಧ್ಯಮ ಶಿಕ್ಷಣ ಮಹಾವಿದ್ಯಾಲಯ, ಬಿಜಾಪುರ : ರೂ ೧೦.

### ನವಕರ್ನಾಟಕ ಪ್ರಕಾಶನ ಬೆಂಗಳೂರು

ನಮ್ಮ ಇಂದಿನ ಆರ್ಥಿಕ ನೀತಿ : ಎಚ್. ಎಸ್. ದೊರೆಸ್ವಾಮಿ ರೂ.೫

ಮಾರ್ಕ್ಸವಾದ, ಮತಧರ್ಮ, ಹಿಂದುತ್ವ : ಎ. ಬಿ. ಬರ್ಧನ್ ರೂ.೪

| | | |
|---|---|---|
| ಬೆಳೆಯುತ್ತಿರುವ ಹಿಮಾಲಯ ; | ಟಿ. ಆರ್. ಅನಂತರಾಮು | ರೂ.೧೫ |
| ರಾಜರ ಲೋಹ ಚಿನ್ನ : | " | ರೂ.೨೦ |
| ಜ್ವಾಲಾಮುಖಿ : | " | ರೂ.೧೫ |
| ಪೇಡಂಭೂತಗಳು ಅಳಿದವೇಕೆ : | " | ರೂ.೧೮ |
| ಮುಲ್ಲಾ ನಸ್ರುದ್ದೀನ್ : | ದು. ನಿಂ ಬೆಳಗಲಿ | ರೂ.೯ |
| ಆನೆಗಳ ಸೀನಪ್ಪ : | ನವಗಿರಿನಂದ | ರೂ.೭ |
| ರಕ್ತದ ಬ್ಯಾಂಕ್ ಕಣ್ಣಿನ ಬ್ಯಾಂಕ್: | ಕಮಲಾ ರಾಮಸ್ವಾಮಿ | ರೂ.೧೦ |
| ಅಮೂಲ್ಯ ರತ್ನ : | " | ರೂ.೭ |
| ಹಣಕಾಸಿನ ವ್ಯವಹಾರಕ್ಕೆ ಬ್ಯಾಂಕ್ : | " | ರೂ ೯ |
| ಪ್ರೀತಿಯ ಗುಟ್ಟು : | ಪ. ರಾಮಕೃಷ್ಣ. ಶಾಸ್ತ್ರಿ | ರೂ.೭ |
| ಕ್ಯಾಲೆಂಡರ ಕಥೆ : | ಡಾ । ಮಹೀಂಧರ ನಳಿನೀ ಮೋಹನ | ರೂ ೨೮ |
| ಮೋಟಾರ ಸೈಕಲ್ ಮುಂ ದುರಸ್ತಿ, | ಎಸ್. ಶ್ರೀನಿವಾಸನ್ | ರೂ.೪೫ |
| ಪಂಪಸೆಟ್‌ಗಳು–ಮೆಕಾನಿಸಂ ಮತ್ತು ದುರಸ್ತಿ : | ಎಸ್. ಶ್ರೀನಿವಾಸನ್ | ರೂ,೨೦ |
| ಮೋಟಾರಕಾರ ಮೆಕಾನಿಸಂ. | ಎಸ್ ಶ್ರೀನಿವಾಸನ್ | ರೂ ೨೨ |
| ಪಕ್ಷಿಗಳು, ಚಿಟ್ಟೆಗಳು: ತರಕಾರಿಗಳು: ಪ್ರಾಣಿಗಳು, ಹಣ್ಣು | | ತಲಾ ರೂ.೧೦ |
| ನಮ್ಮ ಶರೀರ ಆದರ ರಕ್ಷಣೆ : | ಎಸ್ ಆರ್ ಚಂದ್ರಶೇಖರ | ರೂ ೨೫ |
| ನಿಮ್ಮ ಮಾನಸಿಕ ಆರೋಗ್ಯ ಹೆಚ್ಚಿಸಿಕೊಳ್ಳಿ : | " | ರೂ.೨೦ |
| ಜ್ಞಾಪಕ ಶಕ್ತಿಯ ವೃದ್ಧಿ ಹೇಗೆ | " | ರೂ.೧೦ |
| ಮನೋರೋಗಕ್ಕೆ ಚಿಕಿತ್ಸೆ ಏನು ? | " | ರೂ ೧೦ |
| ನಿದ್ರೆ ಮತ್ತು ಕನಸುಗಳು : | " | ರೂ.೯ |
| ಖಿನ್ನತೆ ಎಂಬ ಕಾಯಿಲೆ : | " | ರೂ ೭-೫೦ |
| ಉಯಿಲು ನಾಮ ನಿರ್ದೇಶನ : | ಎಸ್. ಆರ್. ಗೌತಮ್ | ರೂ.೬ |
| ಆಸ್ತಿ ಕೊಳ್ಳುವ ಸಮಸ್ಯೆ ಪರಿಹಾರ : | " | ರೂ.೧೨ |
| ಶ್ರೀ ಸಾಮಾನ್ಯನಿಗೆ ಕಾನೂನು ; | " | ರೂ.೯ |
| ಗೋನೂ ರ್ಝಾ ; | ಪ್ರಿಯತಮ | ರೂ.೭ |
| ಟಾನಿಕ್ ಬೇಕೆ ಟಾನಿಕ್ | " | ರೂ.೭ |
| ಪ್ರಥಮ ಚಿಕಿತ್ಸೆ : | ಡಾ. ಎಂ. ಸತ್ಯನಾರಾಯಣ | ರೂ ೧೫ |
| ಲಾಭದಾಯಕ ಹಸು ಸಾಕಣೆ ; | ಡಾ. ಬಿ. ಎಸ್. ನಾಗರಾಜ. | ರೂ.೮ |

**ಕರ್ನಾಟಕ ದರ್ಶನ :** ಕರ್ನಾಟಕದ ಶ್ರೇಷ್ಠ ಪರಂಪರೆಯನ್ನು ಪ್ರತಿಬಿಂಬಿಸುವ ಪ್ರದರ್ಶನಾಂಗಣವನ್ನು ಬೆಂಗಳೂರು ನಗರ ಸಮೀಪ ಸ್ಥಾಪಿಸಲು ಉದ್ದೇಶಿಸಲಾಗಿದೆ. ಇಡೀ ಕರ್ನಾಟಕದ ಹಿರಿಮೆಯ ಕೇಂದ್ರಗಳ ಭವ್ಯ ಸ್ಮಾರಕಗಳ ಪರಿಚಯವನ್ನು ಒಂದೇ ಕಡೆ ಒದಗಿಸಲಿದೆ. ಇದರಿಂದ ಪ್ರವಾಸಿಗರಿಗೆ ಕರ್ನಾಟಕದ ಸಮಸ್ತ ಪರಿಚಯ ಒಂದೇ ಕಡೆ ವೀಕ್ಷಿಸಲು ಅನುವಾಗುವದು.

**ಅಖಿಲ ಭಾರತ ಸಂಗೀತ ಪ್ರಶಸ್ತಿ :** ಕರ್ನಾಟಕ, ಹಿಂದೂಸ್ಥಾನಿ ಶಾಸ್ತ್ರೀಯ ಹಾಗೂ ಕರ್ನಾಟಕ ಸಂಗೀತವನ್ನು ಪೋಷಿಸುವಲ್ಲಿ ವಿಶಿಷ್ಟ ಸ್ಥಾನ ಹೊಂದಿದೆ. ಈ ಶ್ರೇಷ್ಠ ಸಂಪ್ರದಾಯವನ್ನು ಮುಂದುವರೆಸಲು ಅಖಿಲ ಭಾರತ ಸಂಗೀತ ಪ್ರಶಸ್ತಿಯನ್ನು ಸ್ಥಾಪಿಸಲು ಸ್ಥಾಪಿಸಲು ಉದ್ದೇಶಿಸಿದೆ.

**ಸಂಗೀತ ಉತ್ಸವ :** ಶ್ರೀ ಬಸವರಾಜ ರಾಜಗುರು, ಕುಮಾರ ಗಂಧರ್ವ, ಮಲ್ಲಿಕಾರ್ಜುನ ಮನ್ಸೂರ್ ಅವರ ಅಗಲಿಕೆಯಿಂದ ರಾಜ್ಯ ಮೂವರು ಶ್ರೇಷ್ಠ ಸಂಗೀತಗಾರರನ್ನು ಕಳೆದುಕೊಂಡಿದೆ. ಇವರ ನೆನಪಿನಲ್ಲಿ ಮೂರು ದಿನಗಳ ವಾರ್ಷಿಕ ಸಂಗೀತ ಉತ್ಸವವನ್ನು ಏರ್ಪಡಿಸಿ ಪ್ರತಿಭಾವಂತರನ್ನು ಆಹ್ವಾನಿಸುವ ಯೋಜನೆಯನ್ನು ಸರ್ಕಾರ ಹಮ್ಮಿಕೊಂಡಿದೆ.

**ಜಾನಪದ ಕಲೆಗಳ ಅಭಿವೃದ್ಧಿ :** ಕರ್ನಾಟಕ ವಿಶಿಷ್ಟ ಹಾಗೂ ರೋಮಾಂಚಕ ಜಾನಪದ ಕಲೆಗಳ ತವರೂರು. ಲಲಿತ ಕಲೆಗಳ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಶಾಶ್ವತವಾಗಿ ಜಾನಪದ ಉತ್ಸವವನ್ನು ಏರ್ಪಡಿಸಲು ನಿರ್ಧರಿಸಲಾಗಿದೆ

**ಕುವೆಂಪು ಹಾಗೂ ಬೇಂದ್ರೆ ಪ್ರತಿಷ್ಠಾನ :** ಕರ್ನಾಟಕದ ಇಬ್ಬರು ಶ್ರೇಷ್ಠ ಲೇಖಕರ ಜನ್ಮಸ್ಥಳಗಳಲ್ಲಿ ಪ್ರತಿಷ್ಠಾನಗಳನ್ನು ಸರ್ಕಾರ ಸ್ಥಾಪಿಸಲಿದೆ. ವಿಶ್ವಾದ್ಯಂತ ಸಾಹಿತ್ಯ ಪ್ರೇಮಿಗಳು ಹಾಗೂ ವಿದ್ಯಾರ್ಥಿಗಳನ್ನು ಶ್ರೇಷ್ಠ ಲೇಖಕರ ಹುಟ್ಟೂರುಗಳಿಗೆ ಆಕರ್ಷಿಸಿ ಅವರ ಸಾಧನೆಯನ್ನು ಸ್ಮರಿಸುವ ಉದ್ದೇಶ ಹೊಂದಿದೆ.

**ಶ್ರೇಷ್ಠ ಗೌರವ :** ಕರ್ನಾಟಕದ ರತ್ನ ಪ್ರಾಯರಾದ ರಾಷ್ಟ್ರಕವಿ ಡಾ: ಕೆ. ವಿ. ಪುಟ್ಟಪ್ಪ ಹಾಗೂ ಕನ್ನಡ ನಾಟಕ ಮತ್ತು ಚಿತ್ರರಂಗದ ಪ್ರಸಿದ್ಧ ನಟ ಡಾ: ರಾಜ್ ಕುಮಾರ್ ಅವರಿಗೆ ನವೆಂಬರ್ ಮಾಹೆಯಲ್ಲಿ ರಾಜ್ಯ ಸರ್ಕಾರ ಅತ್ಯಂತ ಶ್ರೇಷ್ಠ 'ಪುರಸ್ಕಾರ ನೀಡಿ, ಯೋಗ್ಯ ರೀತಿಯಲ್ಲಿ ಗೌರವಿಸಲಾಗುವದು.

**ಕರ್ನಾಟಕ ವಾರ್ತೆ**

# ನಮ್ಮ ಮಹಾನ್ ನಾಯಕರ ಕನಸುಗಳು.

## ಆಶೋತ್ತರಗಳು. ಅಭಿಲಾಷೆಗಳು.

## ಜನಸಮುದಾಯದ ಒಳಿತಿಗಾಗಿ.

### ಅವುಗಳ ಈಡೇರಿಕೆಗಾಗಿ ಕರ್ನಾಟಕ ಸರ್ಕಾರ ಕಂಕಣಬದ್ಧ

ಭಾರತವನ್ನು ಸದೃಢ ಹಾಗೂ ಸಮರ್ಥ ರಾಷ್ಟ್ರವನ್ನಾಗಿ ರೂಪಿಸಲು ನಮ್ಮ ನಾಯಕರು ಸತತವಾಗಿ ಪ್ರಯತ್ನಿಸಿದ್ದಾರೆ. "ಭಾರತ ವಿಶ್ವದ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಸಮಾನವಾಗಿ ನಿಲ್ಲಬಲ್ಲ ಶಕ್ತಿಯಾಗಬೇಕು. ರಾಜಕೀಯ ಸ್ವಾತಂತ್ರ್ಯದ ಜೊತೆಜೊತೆಗೆ ಆರ್ಥಿಕ ಸ್ವಾತಂತ್ರ್ಯ ಮತ್ತು ಸಾಮಾಜಿಕ ನ್ಯಾಯ ಸಾಧ್ಯವಾಗಬೇಕು".– ಇದು ಅವರ ಕಲ್ಪನೆಯ ಭಾರತ..

ಈ ಕಲ್ಪನೆ ಮತ್ತು ಆಶೋತ್ತರಗಳೇ ಕರ್ನಾಟಕ ಸರ್ಕಾರಕ್ಕೆ ನಿರಂತರ ಸ್ಫೂರ್ತಿ. ಬಡಜನತೆ ಮತ್ತು ತುಳಿತಕ್ಕೊಳಗಾದ ಸಮುದಾಯದ ಕ್ಷೇಮದ ಬಗ್ಗೆ ಕರ್ನಾಟಕ ಸರ್ಕಾರ ತಳೆದಿರುವ ಆಸಕ್ತಿಯ ಪರಿಣಾಮವಾಗಿ ಹತ್ತಾರು ಜನಪರ ಕಾರ್ಯಕ್ರಮಗಳನ್ನು ರೂಪಿಸಿ, ಅನುಷ್ಠಾನಗೊಳಿಸುತ್ತಿದೆ. ಈ ಕಾರ್ಯಕ್ರಮಗಳು ಕ್ರಾಂತಿಕಾರಿ ಮತ್ತು ಸದೃಢವಾಗಿರುವುದರ ಜೊತೆಗೆ ವಿನೂತನವಾಗಿರುವುದು ವಿಶೇಷ. ಪರಿಣಾಮವಾಗಿ ಕರ್ನಾಟಕದ ಅಸಂಖ್ಯಾತ ಜನರ ಬದುಕಿನಲ್ಲಿ ಅಭೂತಪೂರ್ವ ಪರಿವರ್ತನೆ ಕಾಣುತ್ತಿದೆ ನಿರಾಶೆಯ ಕತ್ತಲು ಕಳೆದು ಭರವಸೆಯ ಬೆಳಕು ಮೂಡಿದೆ.

**ವಿಶ್ವ** – ಗ್ರಾಮೀಣ ಅಭಿವೃದ್ಧಿಯೇ ಈ ಯೋಜನೆಯ ಗುರಿ ಗ್ರಾಮೀಣ ಕುಶಲಕಲೆಗಳಲ್ಲಿ ಉತ್ಪನ್ನಕಾರಕ ಉದ್ಯೋಗಗಳನ್ನು ಸೃಷ್ಟಿಸುವುದು ಈ ಯೋಜನೆಯ ವೈಶಿಷ್ಟ್ಯ. ಈ ಯೋಜನೆಯಡಿಯಲ್ಲಿ ೧ ೨೦,೦೦೦ ಕಾರ್ಯಕೇಂದ್ರಗಳಲ್ಲಿ ೫ ಲಕ್ಷಕ್ಕೂ ಹೆಚ್ಚು ಜನರಿಗೆ ಉದ್ಯೋಗ ಕಲ್ಪಿಸುವ ಗುರಿ. ಇದರಂತೆ ೧,೮೦೦ ಹಳ್ಳಿಗಳಲ್ಲಿ ಸುಮಾರು ೪೬,೦೦೦ ಜನರು ಪ್ರಯೋಜನ ಪಡೆದಿದ್ದಾರೆ ಎಲ್ಲರೂ ಒಂದೆಡೆ ಸೇರಿ ಉತ್ಪಾದನೆ ಮಾಡಲು ಅನುಕೂಲವಾಗುವಂತೆ ೧ ೦೦೦ ಸಮುದಾಯ ಕಾರ್ಯಾಗಾರಗಳನ್ನು ನಿರ್ಮಿಸಲಾಗಿದೆ.

**ಆಶ್ರಯ** – ವಸತಿರಹಿತರಿಗೆ ವಸತಿ ಈ ಯೋಜನೆಯಲ್ಲಿ ರಾಜ್ಯಾದ್ಯಂತ ೬ ಲಕ್ಷಕ್ಕೂ ಹೆಚ್ಚು ನಿವೇಶನಗಳನ್ನು ಗ್ರಾಮಾಂತರ ಪ್ರದೇಶದಲ್ಲಿ, ೧ ಲಕ್ಷಕ್ಕೂ ಹೆಚ್ಚು ನಗರ ಪ್ರದೇಶಗಳಲ್ಲಿ ವಿತರಿಸಿದ್ದು, ಸಾವಿರಾರು ಗೃಹಗಳ ನಿರ್ಮಾಣ ಕಾರ್ಯವು ನಡೆಯುತ್ತಿದೆ.

**ಅಕ್ಷಯ** - ಸಾಕ್ಷರತಾ ಆಂದೋಲನಕ್ಕೆ ಮಹತ್ವರ ಕೊಡುಗೆ. ಅರ್ಧಕ್ಕೆ ಓದು ನಿಲ್ಲಿಸಿ. ಶಾಲೆ ಬಿಡುವ ಮಕ್ಕಳ ಪ್ರಮಾಣ ತಗ್ಗಿಸಿ ಹಾಗೂ ಅವರು ಕಷ್ಟದ ದುಡಿಮೆಯಿಂದ ಮುಕ್ತರಾಗಲು ಅವಕಾಶ ನೀಡುತ್ತಿದೆ. ಈ ಯೋಜನೆಯನ್ವಯ ಸುಮಾರು ೬೦ ಲಕ್ಷಕ್ಕೂ ಬಡಮಕ್ಕಳಿಗೆ ಪ್ರೋತ್ಸಾಹ ಧನ ನೀಡಲಾಗುತ್ತಿದೆ.

**ಶುಶ್ರೂಷಾ**–ಆರೋಗ್ಯಕರ ಸಮಾಜಕ್ಕಾಗಿ. ಈವರೆಗೆ ೧,೭೮೭ ಉಚಿತ ಆರೋಗ್ಯ ತಪಾಸಣಾ ಶಿಬಿರಗಳನ್ನು ಏರ್ಪಡಿಸಿದ್ದು, ಸುಮಾರು ೧,೫೩,೧೯೯ಕ್ಕೂ ಹೆಚ್ಚು ಜನರು ಆರೋಗ್ಯ ತಪಾಸಣೆಗೊಳಗಾಗಿದ್ದಾರೆ.

**ಆರಾಧನಾ** – ದುರ್ಬಲ ವರ್ಗದವರು ವಾಸಿಸುವ ಸ್ಥಳಗಳಲ್ಲಿನ ದೇವಸ್ಥಾನಗಳು ಮತ್ತು ಇತರ ಪೂಜಾಮಂದಿರಗಳನ್ನು ನಿರ್ಮಿಸುವುದು ಹಾಗೂ ಜೀರ್ಣೋದ್ಧಾರ ಮಾಡುವುದು ಈ ಯೋಜನೆಯ ವೈಶಿಷ್ಟ್ಯ. ಈಗಾಗಲೇ ೧,೫೦೦ ಪೂಜಾ ಮಂದಿರಗಳನ್ನು ಜೀರ್ಣೋದ್ಧಾರ ಮಾಡಲಾಗಿದ್ದು, ಹೊಸ ದೇವಸ್ಥಾನಗಳನ್ನು ಸಹ ನಿರ್ಮಿಸಲಾಗುತ್ತಿದೆ.

**ಭೂಗುಣ** – ಕೃಷಿ ಯೋಗ್ಯ ಜಮೀನಿನ ಫಲವತ್ತತೆಯನ್ನು ಪರೀಕ್ಷೆಗೊಳಪಡಿಸುವುದು ಮತ್ತು ಆಯಾಯ ಭೂಮಿಯಲ್ಲಿ ಉತ್ತಮವಾಗಿ ಬೆಳೆಯಬಲ್ಲ ಬೆಳೆಗಳ ವೈಜ್ಞಾನಿಕ ಮಾಹಿತಿ ನೀಡುವುದೇ ಇದರ ಉದ್ದೇಶ.

**ಸಾಧನೆಯ ಸಮಾವೇಶ**
**೧೭ನೇ ಅಕ್ಟೋಬರ್ ೧೯೯೨ ಬೆಂಗಳೂರಿನಲ್ಲಿ**

---

## ಕಾರ್ಯಕ್ರಮ

| ಮೆರವಣಿಗೆ | ಸಮಾವೇಶ |
|---|---|
| ಶ್ರೀ ಕಂಠೀರವ ಸ್ಟೇಡಿಯಂನಿಂದ | ಬೆಂಗಳೂರು ಅರಮನೆ ಆವರಣ |
| ಬೆಳಿಗ್ಗೆ ೧೦ ಘಂಟೆಗೆ | ಮಧ್ಯಾಹ್ನ ೧೨ ಘಂಟೆಗೆ |

---

## ಕರ್ನಾಟಕ ವಾರ್ತೆ

---



---

**ಪುಸ್ತಕ ವಿತರಣೆ : ಒಂದು ಯೋಜನೆ**

ಪ್ರಕಟಿತ ಪುಸ್ತಕಗಳನ್ನು ಸರಿಯಾದ ಓದುಗರಿಗೆ ತಲುಪಿಸುವ ಸಮಸ್ಯೆ ಅನೇಕ ಲೇಖಕರದು. ಈ ಬಗ್ಗೆ ಸಂಕ್ರಮಣ ಪ್ರಕಾಶನ ಒಂದು ಯೋಜನೆ ಹಾಕಿದೆ. ವಿವರಗಳಿಗಾಗಿ ಸ್ವ-ವಿಳಾಸದ ಅಂಚೆ ಪಾಕೀಟು ಕಳಿಸಿರಿ.

---

ಸಂಕ್ರಮಣ : ನವಂ-ಡಿಸೆಂ ೧೯೭೨

SANKRAMANA PRAKASHANA DHARWAD-580 001